CPMG / KA / BG-GPO/13/2003-2005



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೩೮ | ಬೆಂಗಳೂರು, ಗುರುವಾರ, ನವೆಂಬರ್ ೨೦, ೨೦೦೩ (ಕಾರ್ತಿಕ ೨೯ , ಶಕ ವರ್ಷ ೧೯೨೫) | ಸಂಚಿಕೆ ೪೬ |
|---|---|---|

## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾಗಿ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು.

### ಕಾನೂನು ಸಚಿವಾಲಯ

**ವಿಷಯ:** ಶ್ರೀ ಶಂಕರೇಗೌಡ, ಸರ್ಕಾರಿ ಅಭಿಯೋಜಕರು, ಶಿವಮೊಗ್ಗ, ಇವರ ವಿರುದ್ಧದ ಆರೋಪಗಳ ಬಗ್ಗೆ ವಿಚಾರಣೆ ನಡೆಸಲು ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಯವರನ್ನು ನೇಮಿಸುವ ಬಗ್ಗೆ ಆದೇಶ.

**ಓದಲಾಗಿದೆ:**
1) ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಡಿಪಿಎನ್: ಲೆಕ್ಕ-1: 112:2000-01 ದಿನಾಂಕ 29.1.02.
2) ಸರ್ಕಾರದ ಇದೇ ಸಮ ಸಂಖ್ಯೆಯ ದಿನಾಂಕ: 28.5.02 ರ ಪತ್ರ ನೋಟೀಸು.
3) ಸರ್ಕಾರದ ಇದೇ ಸಮ ಸಂಖ್ಯೆಯ, ದಿನಾಂಕ: 27.11.02ರ ಪತ್ರ.
4) ಸರ್ಕಾರದ ಇದೇ ಸಮ ಸಂಖ್ಯೆಯ ದಿನಾಂಕ: 24.2.03ರ ಕಾರಣ ಕೇಳುವ ತಿಳುವಳಿಕೆ ಪತ್ರ.
5) ಶ್ರೀ ಸಿ. ಶಂಕರೇಗೌಡ, ರವರ ದಿನಾಂಕ: 12.3.03.
6) ಸರ್ಕಾರದ ಇದೇ ಸಮ ಸಂಖ್ಯೆಯ ದಿನಾಂಕ: 11.06.03ರ ಪತ್ರ.

**ಪ್ರಸ್ತಾವನೆ:**

ಶ್ರೀ ಸಿ. ಶಂಕರೇಗೌಡ, ಸರ್ಕಾರಿ ಅಭಿಯೋಜಕರು, ಮಂಡ್ಯ ಇವರಿಗೆ ರೂ. 1,50,000/- ಗಳನ್ನು ಕಾರು ಖರೀದಿ ಮಾಡಲು, ಮುಂಗಡವನ್ನು ಪಡೆದ ಒಂದು ತಿಂಗಳೊಳಗಾಗಿ ಹೊಸ ವಾಹನವನ್ನು ಅಧಿಕೃತ ಮಾರಾಟಗಾರರಿಂದ ಖರೀದಿಸಿ, ವಾಹನವನ್ನು ಖರೀದಿಸಿದ ಒಂದು ತಿಂಗಳ ಒಳಗೆ ಅಥವಾ ಮುಂಗಡವನ್ನು ಪಡೆದ 2 ತಿಂಗಳ ಒಳಗಾಗಿ ಇವುಗಳಲ್ಲಿ ಯಾವುದು ಮೊದಲೋ ಅದರ ಒಳಗಡೆ ವಾಹನ ಖರೀದಿ ನೋಂದಣಿ ಮಾಡಿಸಿದ ಬಗ್ಗೆ ಸಂಬಂಧಪಟ್ಟ ದಾಖಲೆಗಳನ್ನು ಸಲ್ಲಿಸುವ ಷರತ್ತಿಗೊಳಪಟ್ಟು ಮುಂಗಡ ಹಣವನ್ನು ಮಂಜೂರು ಮಾಡಲಾಗಿತ್ತು. ಮುಂಗಡ ಪಡೆದ ಸರ್ಕಾರಿ ನೌಕರನು ಕಾರು ಖರೀದಿ ನೋಂದಣಿ ಪುಸ್ತಕವನ್ನು ಹಾಜರುಪಡಿಸಲು ತಪ್ಪಿದಲ್ಲಿ ಇಡೀ, ಮುಂಗಡದ ಮೇಲೆ ಮುಂಗಡ ಪಡೆದ ದಿನಾಂಕದಿಂದ ನೋಂದಣಿ ಪುಸ್ತಕವನ್ನು ಹಾಜರುಪಡಿಸಿದ ದಿನಾಂಕದವರೆಗೆ ದಂಡರೂಪದ ಬಡ್ಡಿಯನ್ನು ಪಾವತಿ ಮಾಡಬೇಕಾಗುತ್ತದೆ. ಸದರಿ ಅಧಿಕಾರಿಯವರು ಕಾರು ಖರೀದಿ ಮುಂಗಡವನ್ನು ದಿನಾಂಕ: 4.7.2000ರಂದು ಪಡೆದಿದ್ದು ಇಲ್ಲಿಯವರೆಗೆ ನೋಂದಣಿ ಪುಸ್ತಕವನ್ನು ಹಾಜರು-ಪಡಿಸಿಲ್ಲ ಹಾಗೂ ಈ ಅವಧಿಗೆ ದಂಡ ರೂಪದ ಬಡ್ಡಿಯೊಂದಿಗೆ ಒಂದೆ ಗಂಟಿನಲ್ಲಿ ಮುಂಗಡ ಮೊತ್ತವನ್ನು ಸರ್ಕಾರಕ್ಕೆ ಜಮಾ ಮಾಡದೆ ಇರುವುದರಿಂದ ಈ ಅಧಿಕಾರಿ ವಿರುದ್ಧ ಶಿಸ್ತು ಕ್ರಮ ಜರುಗಿಸಲು ಕ್ರಮಾಂಕ (1)ರಲ್ಲಿ ಓದಲಾಗಿರುವ ಪತ್ರದಲ್ಲಿ ನಿರ್ದೇಶಕರು ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರು, ಇವರು ಪ್ರಸ್ತಾವನೆ ಸಲ್ಲಿಸಿರುವರು ಕ್ರಮಾಂಕ (2)ರಲ್ಲಿ ಓದಲಾದ ದಿನಾಂಕ: 28.5.02ರ ನೋಟಿಸ್ಸನ್ನು ಸದರಿ ಅಧಿಕಾರಿಯವರಿಗೆ ಜಾರಿಮಾಡಿ, ಕೂಡಲೇ ಇಲ್ಲಿಯವರೆಗಿನ ಅವಧಿಗೆ ದಂಡ ರೂಪದ ಬಡ್ಡಿಯೊಂದಿಗೆ ಒಂದೇ ಗಂಟಿನಲ್ಲಿ ಮುಂಗಡ ಮೊತ್ತವನ್ನು ಜಮಾ ಮಾಡುವಂತೆಯೂ ಇಲ್ಲದಿದ್ದಲ್ಲಿ ಅವರ ವಿರುದ್ಧ ಶಿಸ್ತು ಕ್ರಮ ಜರುಗಿಸಲಾಗುವುದೆಂದು ತಿಳಿಸಲಾಗಿತ್ತು. ಆದರೆ ಸದರಿ ನೋಟಿಸ್ಸಿಗೆ ಶ್ರೀ ಶಂಕರೇಗೌಡ, ಸರ್ಕಾರಿ ಅಭಿಯೋಜಕರು, ಮಂಡ್ಯ ಇವರು ಯಾವ ಲಿಖಿತ ಹೇಳಿಕೆಯನ್ನು ನೀದದೆ ಇರುವುದರಿಂದ ಅವರ ವಿರುದ್ಧ ಶಿಸ್ತು ಕ್ರಮ ತೆಗೆದುಕೊಳ್ಳಲು ತೀರ್ಮಾನಿಸಿ ಮೇಲೆ ಕ್ರಮಾಂಕ (4)ರಲ್ಲಿ ಓದಲಾದ ದಿನಾಂಕ: 24.2.03 ರಲ್ಲಿ ಆರೋಪಣಾ ಪಟ್ಟಿ, ದಾಖಲಾತಿ ಪಟ್ಟಿ ಸಾಕ್ಷಿದಾರರ ಪಟ್ಟಿ

ಇತ್ಯಾದಿಗಳೊಂದಿಗೆ ಕಾರಣ ಕೇಳುವ ತಿಳುವಳಿಕೆ ಪತ್ರ ಜಾರಿ ಮಾಡಿ ಅದು ತಲುಪಿದ 15 ದಿನಗಳೊಳಗಾಗಿ ಅವರ ಲಿಖಿತ ಹೇಳಿಕೆಯನ್ನು ನೀಡುವಂತೆ ತಿಳಿಸಲಾಗಿತ್ತು.

ಮೇಲೆ ಕ್ರಮಾಂಕ (5)ರಲ್ಲಿ ಓದಲಾದ ದಿನಾಂಕ: 12.03.03 ಮನವಿಯಲ್ಲಿ ಪ್ರತಿವಾದದ ಲಿಖಿತ ಹೇಳಿಕೆಯನ್ನು ನೀಡಲು ದಿನಾಂಕ: 30.04.03 ರವರೆಗೆ ಅವಕಾಶವನ್ನು ನೀಡುವಂತೆ ಸದರಿ ಅಧಿಕಾರಿ ಕೋರಿದ್ದರು. ಅದರ ಮೇರೆಗೆ ಮೇಲೆ ಕ್ರಮಾಂಕ (6) ರಲ್ಲಿ ಓದಲಾದ ದಿನಾಂಕ: 16.4.03ರ ಪತ್ರದಲ್ಲಿ ಸದರಿ ಅಧಿಕಾರಿಯವರಿಗೆ ಲಿಖಿತ ಹೇಳಿಕೆ ನೀಡಲು ದಿನಾಂಕ: 15.4.03ರ ವರೆಗೆ ಕಾಲಾವಕಾಶ ನೀಡಲಾಗಿತ್ತು. ಸದರಿ ಅಧಿಕಾರಿಯವರು ಕೋರಿದ್ದ ದಿನಾಂಕದ ಅವಧಿ ಮುಗಿದು ಹೋಗಿದ್ದು ಸದರಿ ಅಧಿಕಾರಿಯವರು ಯಾವುದೇ ಲಿಖಿತ ಹೇಳಿಕೆಯನ್ನು ಸಲ್ಲಿಸದೆ ಇರುವುದರಿಂದ ಹಾಗೂ ಸದರಿ ಪ್ರಕರಣದ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವ ದೃಷ್ಟಿಯಿಂದ ಸದರಿ ಅಧಿಕಾರಿಯವರ ಮೇಲೆ ಇಲಾಖಾ ವಿಚಾರಣೆಯನ್ನು ನಡೆಸಲು ತೀರ್ಮಾನಿಸಿದೆ. ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 102 ಪಿಪಿಇ 2002, ಬೆಂಗಳೂರು, ದಿನಾಂಕ: 16ನೇ ಅಕ್ಟೋಬರ್ 2003**

1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಅಪೀಲು) ನಿಯಮಗಳ 11ನೇ ನಿಯಮದ (2)ನೇ ನಿಯಮದನ್ವಯ ಶ್ರೀ ಸಿ. ಶಂಕರೇಗೌಡ, ಸರ್ಕಾರಿ ಅಭಿಯೋಜಕರು, ಮಂಡ್ಯ (ಪ್ರಸ್ತುತ ಶಿವಮೊಗ್ಗದಲ್ಲಿ ಕಾರ್ಯನಿರ್ವಹಿಸುತ್ತಿರುವ) ಇವರ ವಿರುದ್ಧದ ಆಪಾದನೆಗಳ ಬಗ್ಗೆ ಸದರಿ ನಿಯಮ 11 ಮತ್ತು 11ಎ ರನ್ವಯ ವಿಚಾರಣೆ ನಡೆಸಲು ಶ್ರೀ ಬಿ. ಕೆ. ಕಣವಿ, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ನಂ. 1806, 8ನೇ ಮೈನ್, ಜುಡಿಷಿಯಲ್ ಆಫೀಸರ್ ಲೇಔಟ್, ಬಿ.ಕೆ.ವಿ.ಕೆ ಪೋಸ್ಟ್, ಬೆಂಗಳೂರು ಇವರನ್ನು ರೂ. 5,000-00 (ರೂಪಾಯಿ ಐದು ಸಾವಿರ ಮಾತ್ರ) ಸಂಚಿತ ಸಂಭಾವನೆ (ಕನ್ಸಾಲಿಡೇಟೆಡ್ ರೆಮ್ಯೂನರೇಷನ್) ಹಾಗೂ ರೂ.1,000.00 (ರೂಪಾಯಿ ಒಂದು ಸಾವಿರ ಮಾತ್ರ) ವಾಹನ ಭತ್ಯೆ (ಕನ್‌ವೆಯನ್ಸ್ ಅಲೋಯನ್ಸ್) ನೀಡುವ ಆಧಾರದ ಮೇಲೆ ವಿಚಾರಣಾಧಿಕಾರಿಗಳನ್ನಾಗಿ ಹಾಗೂ ಸದರಿ ಪ್ರಕರಣದಲ್ಲಿ ಸರ್ಕಾರದ ಪರವಾಗಿ ದಾಖಲೆಗಳನ್ನು ಮಂಡಿಸಲು ಸಿಸಿಎ ನಿಯಮಾವಳಿಗಳ ನಿಯಮ 11(5)(ಸಿ) ರನ್ವಯ ಶ್ರೀ. ಫೇನಣ್ಣವರ್ ಜಂಟಿ ಅಭಿಯೋಗ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶನಾಲಯ, ಬೆಂಗಳೂರು ಇವರನ್ನು ಮಂಡನಾಧಿಕಾರಿಯನ್ನಾಗಿ ಈ ಕೆಳಕಂಡ ಷರತ್ತುಗಳೊಂದಿಗೆ ನೇಮಿಸಲಾಗಿದೆ.

1. ಇಲಾಖಾ ವಿಚಾರಣೆಯನ್ನು ಜಂಟಿ ಅಭಿಯೋಜಕರ ಕಛೇರಿ (ಆಡಳಿತ), ಬೆಂಗಳೂರು, ಇವರ ಕಛೇರಿಯ ಆವರಣದಲ್ಲಿ ನಡೆಸತಕ್ಕದ್ದು.
2. ವಿಚಾರಣಾ ಪ್ರಾಧಿಕಾರಕ್ಕೆ ವಿಚಾರಣೆ ಮುಕ್ತಾಯವಾಗುವವರೆಗೆ ಜಂಟಿ ಅಭಿಯೋಜಕರು, ಇವರು ತಮ್ಮ ಕಛೇರಿಯಲ್ಲಿ ಲಭ್ಯವಿರುವ ಶೀಘ್ರಲಿಪಿಗಾರ: ಬೆರಳಚ್ಚುಗಾರರ ಸೇವೆಯನ್ನು ಒದಗಿಸುವುದರ ಜೊತೆಗೆ ಅಗತ್ಯ ಲೇಖನ ಸಾಮಗ್ರಿಗಳನ್ನು ಸದರಿ ಕಛೇರಿಯ ಮುಖ್ಯಸ್ಥರು ಒದಗಿಸತಕ್ಕದ್ದು;
3. ಇಲಾಖಾ ವಿಚಾರಣೆಯನ್ನು ಎರಡು ತಿಂಗಳೊಳಗಾಗಿ ಮುಗಿಸಿ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.
4. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರು, ಇವರು ರೂ. 5.000.00 ದಂತೆ ಸಂಚಿತ ಸಂಭಾವನೆ ಹಾಗೂ ರೂ.1,000-00 ವಾಹನ ಭತ್ಯೆಯನ್ನು ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ ನಂತರ ಪಾವತಿಸತಕ್ಕದ್ದು.
5. ಈ ಸಂಬಂಧ ತಗಲುವ ವೆಚ್ಚವನ್ನು ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ಕಛೇರಿ ವೇತನ ಲೆಕ್ಕ ಶೀರ್ಷಿಕೆಯಡಿಯಲ್ಲಿ ಒದಗಿಸಲಾದ ಮೊತ್ತದಿಂದ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ. ಹೆಚ್. ನಾಗೇಂದ್ರಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 1372 ಕಾನೂನು ಇಲಾಖೆ (ಆಡಳಿತ-2).

## ENERGY SECRETARIAT

**Sub :** Own Your Transformer Scheme for energisation of IP Set consumers in the State.

**Preamble:**

Managing Director, KPTCL in his letter dated 8th August 2003 requested the Government of India, Ministry of Power to give 'In-Principle Clearance' for financing the scheme Known as 'Own Your Transformer' Scheme under 'APDRP' to regularize the unauthorized IP set connections and also to energise new IP Set connections in the State during the year.

Meanwhile, Managing Director, KPTCL requested the Government for issue of orders permitting regularization of unauthorized IP set connections and also to fix a target for providing new IP set connections for each year under the 'Own Your Transformer' Scheme. As per the scheme, it is stated that T & D losses will come down by 4% on regularization of about 2 Lakh unauthorized IP set consumers in the State. Managing Director, KPTCL also proposed that the unauthorized IP set be regularized by providing 11 KV H.T. line and a 10 KVA distribution transformer for each IP set consumer. It is proposed that new IP set connections also shall be serviced on H.T. system only as envisaged under 'Own Your Transformer' Scheme. Hence, the following order:

**Government Order No. DE 59 PSR 2003, Bangalore Dated: 21st October 2003**

In the circumstances explained in the Preamble, Government are pleased to approve the following.

1. To energise 60,000 new IP Set connections with a transformer for each connection, this year, on payment of Rs. 25,000 by each consumer, under 'Own Your Transformer' Scheme.
2. To regularize unauthorized IP Set connections under "Own Your Transformer Scheme" on payment of Rs. 35,000 by each consumer, for regularization.

By Order and in the name of the Governor of Karnataka,

PR-1387

**K. L. JAYARAM**
Under Secretary to Government,
Energy Department.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಶ್ರೀ ಪ್ರದೀಪ್ ಎಸ್. ರಾಜನಾಳ, ಸಹ ಕಾರ್ಯದರ್ಶಿ, ಕಾರ್ಮಿಕ ಇಲಾಖೆ ಇವರಿಗೆ ವೇತನ ರಹಿತ ರಜೆ ಮಂಜೂರಾತಿ ಬಗ್ಗೆ.

**ಓದಲಾಗಿದೆ :** 1) ಅಧಿಕೃತ ಜ್ಞಾಪನ ಸಂಖ್ಯೆ: ಯೋಇ 1810 ಪ್ರಕಾ 2003 ದಿನಾಂಕ: 6.6.2003.
2) ಅಧಿಕೃತ ಜ್ಞಾಪನ ಸಂಖ್ಯೆ: ಯೋಇ 1810 ಪ್ರಕಾ 2003 ದಿನಾಂಕ: 9.7.2003.
3) ಅಧಿಕೃತ ಜ್ಞಾಪನ ಸಂಖ್ಯೆ: ಯೋಇ 1810 ಪ್ರಕಾ 2003 ದಿನಾಂಕ: 20.7.2003.
4) ಟಿಪ್ಪಣಿ ಸಂಖ್ಯೆ: ಯೋಇ 1856 ಪ್ರಕಾ 2003 ದಿನಾಂಕ: 10.7.2003 ಮತ್ತು 29.7.2003.
5) ಅಧೀನ ಕಾರ್ಯದರ್ಶಿ, ಸಿ.ಆ.ಸು. ಇಲಾಖೆ (ಲೆಕ್ಕಪತ್ರ-1) ಇವರ ಟಿಪ್ಪಣಿ ಸಂಖ್ಯೆ: ಸಿಆಸುಇ 2113 ಲೆ-ಬಿ 2003, ದಿನಾಂಕ: 14.7.2003 ಹಾಗೂ 1.8.2003

**ಪ್ರಸ್ತಾವನೆ:**

ಮೇಲೆ ಓದಲಾದ ಉಲ್ಲೇಖ (1) ರಿಂದ (3)ರ ಅಧಿಕೃತ ಜ್ಞಾಪನಗಳಲ್ಲಿ ಪ್ರಧಾನ ಕಾರ್ಯದರ್ಶಿ, ಯೋಜನೆ, ಸಾಂಖ್ಯಿಕ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ ಇವರು ಶ್ರೀ ಪ್ರದೀಪ್ ಎಸ್. ರಾಜನಾಳ, ಸಹ ಕಾರ್ಯದರ್ಶಿ, ಕಾರ್ಮಿಕ ಇಲಾಖೆ ಇವರು ಯೋಜನೆ, ಸಾಂಖ್ಯಿಕ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ ಇಲ್ಲಿ ಸಹ ಕಾರ್ಯದರ್ಶಿಯಾಗಿ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ ಮಾರ್ಚ್, ಮೇ, ಜುಲೈ 2003 ಮಾಹೆಯಲ್ಲಿ ಕೆಳಕಂಡ ದಿನಾಂಕಗಳಂದು ಸರ್ಕಾರಿ ಸೇವೆಗೆ ಅನಧಿಕೃತ ಗೈರು ಹಾಜರಾಗಿರುವುದರಿಂದ ಇವರ ಗೈರು ಹಾಜರಿಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 106-ಎ ರಡಿಯಲ್ಲಿ ವೇತನ ರಹಿತ ರಜೆಯೆಂದು ಪರಿಗಣಿಸಿ ಆದೇಶ ಹೊರಡಿಸಿದ್ದಾರೆ.

**ಮಾರ್ಚ್ ತಿಂಗಳಲ್ಲಿ**

1. ದಿನಾಂಕ: 05.03.2003 ಮತ್ತು 06.03.2003
2. ದಿನಾಂಕ: 10.03.2003 ರಿಂದ 12.03.2003 ರವರೆಗೆ ಒಟ್ಟು 19 ದಿನಗಳು
3. ದಿನಾಂಕ: 18.03.2003 ರಿಂದ 31.03.2003 ರವರೆಗೆ

**ಮೇ ತಿಂಗಳಲ್ಲಿ**

1. ದಿನಾಂಕ: 14.05.2003 ಮತ್ತು 16.05.2003
2. ದಿನಾಂಕ: 19.05.2003 ಮತ್ತು 20.05.2003 ಒಟ್ಟು 15 ದಿನಗಳು
3. ದಿನಾಂಕ: 21.05.2003 ರಿಂದ 31.05.2003 ರವರೆಗೆ

**ಜುಲೈ ತಿಂಗಳಲ್ಲಿ**

1. ದಿನಾಂಕ: 01.07.2003 ರಿಂದ 17.07.2003 ರವರೆಗೆ ಒಟ್ಟು 17 ದಿನಗಳು

ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ಟಿಪ್ಪಣಿಯಲ್ಲಿ ಪ್ರಧಾನ ಕಾರ್ಯದರ್ಶಿ, ಯೋಜನೆ ಸಾಂಖ್ಯಿಕ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ ಇವರು ಶ್ರೀ ಪ್ರದೀಪ್ ಎಸ್. ರಾಜನಾಳ, ಸಹ ಕಾರ್ಯದರ್ಶಿ ಇವರು ಮೇಲ್ಕಂಡ ದಿನಾಂಕಗಳಂದು ಕಛೇರಿಗೆ ಅನಧಿಕೃತ ಗೈರು ಹಾಜರಾಗಿದ್ದು ಇವರ ಗೈರು ಹಾಜರಿಯನ್ನು ವೇತನ ರಹಿತ ರಜೆಯೆಂದು ಪರಿಗಣಿಸಿರುವುದರಿಂದ ಸದರಿ ದಿನಾಂಕಗಳಿಗೆ ವೇತನವನ್ನು ಕಡಿತಗೊಳಿಸುವಂತೆ ಲೆಕ್ಕಪತ್ರ ಶಾಖೆಗೆ ಸೂಚನೆ ನೀಡಿದ್ದಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (5)ರ ಟಿಪ್ಪಣಿಯಲ್ಲಿ ಅಧೀನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಲೆಕ್ಕಪತ್ರ) ಇವರು ಶ್ರೀ ಪ್ರದೀಪ್ ಎಸ್. ರಾಜನಾಳ ಇವರ ಅನಧಿಕೃತ ಗೈರು ಹಾಜರಾತಿ ಬಗ್ಗೆ ಸದರಿ ದಿನಾಂಕಗಳಿಗೆ ವೇತನವನ್ನು ಕಠಾವು ಮಾಡಲು ಅಧಿಕಾರಿಯವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 106-ಎ ಅನುಸಾರ ವೇತನ ರಹಿತ ರಜೆ ಮಂಜೂರು ಮಾಡಿ ಆದೇಶ ಹೊರಡಿಸುವಂತೆ ಕೋರಿದ್ದಾರೆ.

ವಿಷಯವನ್ನು ಪರಿಶೀಲಿಸಲಾಗಿದ್ದು ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 237 ಸಆರ 2003, ಬೆಂಗಳೂರು, ದಿನಾಂಕ: 22ನೇ ಅಕ್ಟೋಬರ್ 2003**

ಶ್ರೀ ಪ್ರದೀಪ್ ಎಸ್. ರಾಜನಾಳ, ಸಹ ಕಾರ್ಯದರ್ಶಿ, ಕಾರ್ಮಿಕ ಇಲಾಖೆ ಇವರು ಯೋಜನೆ, ಸಾಂಖ್ಯಿಕ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ ಇಲ್ಲಿ ಸಹ ಕಾರ್ಯದರ್ಶಿಯಾಗಿ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ ಈ ಕೆಳಕಂಡ ದಿನಾಂಕಗಳಂದು ಸರ್ಕಾರಿ ಸೇವೆಗೆ ಅನಧಿಕೃತ ಗೈರು ಹಾಜರಾಗಿರುವುದರಿಂದ ಸದರಿ ಗೈರು ಹಾಜರಿಯ ಒಟ್ಟು 51 ದಿನಗಳ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 106-ಎ ರಡಿಯಲ್ಲಿ ವೇತನ ರಹಿತ ರಜೆಯೆಂದು ಪರಿಗಣಿಸಲಾಗಿದೆ.

**ಮಾರ್ಚ್ ತಿಂಗಳಲ್ಲಿ**

1. ದಿನಾಂಕ: 05.03.2003 ಮತ್ತು 06.03.2003
2. ದಿನಾಂಕ: 10.03.2003 ರಿಂದ 12.03.2003 ರವರೆಗೆ ಒಟ್ಟು 19 ದಿನಗಳು
3. ದಿನಾಂಕ: 18.03.2003 ರಿಂದ 31.03.2003 ರವರೆಗೆ

**ಮೇ ತಿಂಗಳಲ್ಲಿ**

1. ದಿನಾಂಕ: 14.05.2003 ಮತ್ತು 16.05.2003
2. ದಿನಾಂಕ: 19.05.2003 ಮತ್ತು 20.05.2003 ಒಟ್ಟು 15 ದಿನಗಳು
3. ದಿನಾಂಕ: 21.05.2003 ರಿಂದ 31.05.2003 ರವರೆಗೆ

**ಜುಲೈ ತಿಂಗಳಲ್ಲಿ**

1. ದಿನಾಂಕ: 01.07.2003 ರಿಂದ 17.07.2003 ರವರೆಗೆ ಒಟ್ಟು 17 ದಿನಗಳು

ಹಾಗೂ ಈ ಗೈರು ಹಾಜರಿಯ ಅವಧಿಯನ್ನು ಅವರ ಖಾತೆಯಲ್ಲಿ ಜಮೆ ಇರುವ 20 ದಿನಗಳ ಅರ್ಧ ವೇತನ ರಜೆಗೆ ಹಾಗೂ ಉಳಿದ 31 ದಿನಗಳನ್ನು ಅಸಾಧಾರಣ ರಜೆಗೆ ಜಮೆ ಹಾಕಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯು ಟಿಪ್ಪಣಿ ಸಂಖ್ಯೆ: ಆಇ 1297 ಸೇ-1-03 ದಿನಾಂಕ: 20.9.2003 ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು. ಪಿ. ಪ್ರಭು**

ಪಿ.ಆರ್. 1390 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಆಸುಇ (ಸೇವೆಗಳು-2).

**ವಿಷಯ :** ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿನ ಸಿ.ಆ.ಸು. ಇಲಾಖೆ ಇ-ಗವರ್ನೆನ್ಸ್ ವಿಭಾಗದಲ್ಲಿ ಒಂದು ಉಪ ಕಾರ್ಯದರ್ಶಿ ಹುದ್ದೆಯನ್ನು ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ಸೃಜಿಸುವ ಬಗ್ಗೆ.

**ಓದಲಾಗಿದೆ :** 1) ಅಧಿಸೂಚನೆ ಸಂಖ್ಯೆ: ಸಿಆಸುಇ 91 ಆಸೇವ 2003 ದಿನಾಂಕ: 27.8.2003

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ: (1) ರಲ್ಲಿ ಓದಲಾದ ದಿನಾಂಕ: 27.8.2003 ಅಧಿಸೂಚನೆಯಲ್ಲಿ ಶ್ರೀಮತಿ ಜಿ. ಸತ್ಯವತಿ, ಕೆ.ಎ.ಎಸ್. (ಹಿರಿಯ ಶ್ರೇಣಿ) ಅಧಿಕಾರಿ ಇವರನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಇ-ಗವರ್ನೆನ್ಸ್ (ಆಡಳಿತ ಸುಧಾರಣೆ) ವಿಭಾಗದಲ್ಲಿ ಹೊಸದಾಗಿ ಸೃಜಿಸಲಾದ ಉಪ ಕಾರ್ಯದರ್ಶಿ ಹುದ್ದೆಗೆ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ವರ್ಗಾಯಿಸಿ ನೇಮಿಸಲಾಗಿರುತ್ತದೆ.

ಈ ಕಾರಣದಿಂದಾಗಿ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಇ-ಗವರ್ನೆನ್ಸ್ (ಆಡಳಿತ ಸುಧಾರಣೆ) ವಿಭಾಗದಲ್ಲಿ ಒಂದು ಉಪ ಕಾರ್ಯದರ್ಶಿ ಹುದ್ದೆಯನ್ನು ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ಶ್ರೀಮತಿ ಜಿ. ಸತ್ಯವತಿ, ಕೆ.ಎ.ಎಸ್. ಇವರು ಸದರಿ ಹುದ್ದೆಯಲ್ಲಿ ಕರ್ತವ್ಯಕ್ಕೆ ಹಾಜರಾದ ದಿನಾಂಕದಿಂದ ಜಾರಿಗೆ ಬರುವಂತೆ ಸೃಜಿಸುವ ಅಗತ್ಯತೆ ಇರುತ್ತದೆ. ಆದುದರಿಂದ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 77 ಸಸಿವಿ 2003, ಬೆಂಗಳೂರು, ದಿನಾಂಕ: 27ನೇ ಅಕ್ಟೋಬರ್ 2003**

ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿನ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಇ-ಗವರ್ನೆನ್ಸ್ (ಆಡಳಿತ ಸುಧಾರಣೆ) ವಿಭಾಗದಲ್ಲಿ ಒಂದು ಉಪ ಕಾರ್ಯದರ್ಶಿ ಹುದ್ದೆಯನ್ನು ಕೆಳಕಂಡ ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ಶ್ರೀಮತಿ ಜಿ. ಸತ್ಯವತಿ. ಕೆ.ಎ.ಎಸ್. (ಹಿರಿಯ ಶ್ರೇಣಿ) ಇವರು ಸದರಿ ಹುದ್ದೆಯಲ್ಲಿ ಕರ್ತವ್ಯಕ್ಕೆ ಹಾಜರಾದ ದಿನಾಂಕದಿಂದ ಜಾರಿಗೆ ಬರುವಂತೆ ಒಂದು ವರ್ಷದ ಅವಧಿಗೆ ಅಥವಾ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಸೃಜಿಸಲು ಮಂಜೂರಾತಿ ನೀಡಲಾಗಿದೆ.

1. ಹಿರಿಯ ಶೀಘ್ರಲಿಪಿಗಾರರು 1 ಹುದ್ದೆ
2. ಕಿರಿಯ ಸಹಾಯಕ 1 ಹುದ್ದೆ
3. ದಲಾಯತ್ 1 ಹುದ್ದೆ

ಈ ಆದೇಶವನ್ನು ಆರ್ಥಿಕ ಇಲಾಖೆಯು ಟಿಪ್ಪಣಿ ಸಂಖ್ಯೆ: ಆಇ 1789 ವೆಚ್ಚ-5/2003, ದಿನಾಂಕ: 14.10.2003 ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು. ಪಿ. ಪ್ರಭು**

ಪಿ.ಆರ್. 1391 ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ಸೇವೆಗಳು-2).

**ವಿಷಯ :** ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿನ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ವಿಶೇಷಾಧಿಕಾರಿ ಮತ್ತು ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ ಹುದ್ದೆಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ :** 1) ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 278 ಸಅಸೇ 2001 ದಿನಾಂಕ: 1.2.2002.

2) ಅಧಿಸೂಚನೆ ಸಂಖ್ಯೆ: ಸಿಆಸುಇ 278 ಸಅಸೇ 2001 ದಿನಾಂಕ: 1.2.2002.

3) ಮಹಾಲೇಖಪಾಲರು, ಬೆಂಗಳೂರು ಇವರ ಪತ್ರ ಸಂಖ್ಯೆ: ಜೀಇ XII ಎ-1/2003-04/446, ದಿನಾಂಕ: 14.7.2003.

4) ಅಧಿಸೂಚನೆ ಸಂಖ್ಯೆ: ಸಿಆಸುಇ 282 ಸಅಸೇ 2003 (01) ದಿನಾಂಕ: 12.9.2003.

5) ಅಧಿಸೂಚನೆ ಸಂಖ್ಯೆ: ಸಿಆಸುಇ 282 ಸಅಸೇ 2003 (02) ದಿನಾಂಕ: 12.9.2003.

**ಪ್ರಸ್ತಾವನೆ:**

ಕ್ರಮ ಸಂಖ್ಯೆ (1) ರಲ್ಲಿ ಓದಲಾಗಿರುವ ದಿನಾಂಕ: 1.2.2002 ರ ಸರ್ಕಾರಿ ಆದೇಶದಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯಲ್ಲಿ ಅಸ್ಥಿತ್ವದಲ್ಲಿರುವ ಅಧೀನ ಕಾರ್ಯದರ್ಶಿ ಹುದ್ದೆಯನ್ನು ದಿನಾಂಕ: 25.9.2001 ರಿಂದ ಜಾರಿಗೆ ಬರುವಂತೆ ಒಂದು ವರ್ಷದ ಅವಧಿಗೆ ಅಥವಾ ಶ್ರೀ ಸಿ. ಎಸ್. ಪ್ರತಿನಿಧಿ ಇವರ ಸೇವೆಯು ಆ ಇಲಾಖೆಗೆ ಅಗತ್ಯವಿರುವವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ರೂ. 9580-14200 ವೇತನ ಶ್ರೇಣಿಯ ವಿಶೇಷಾಧಿಕಾರಿ ಹಾಗೂ ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ ಹುದ್ದೆ ಎಂದು ಉನ್ನತೀಕರಿಸಲಾಗಿರುತ್ತದೆ. ಕ್ರಮಸಂಖ್ಯೆ (2) ರಲ್ಲಿ ಓದಲಾಗಿರುವ ದಿನಾಂಕ: 1.2.2002ರ ಅಧಿಸೂಚನೆಯಲ್ಲಿ ಶ್ರೀ ಸಿ. ಎಸ್. ಪತ್ರಿನಿಧಿ ಇವರನ್ನು ಈ ಹುದ್ದೆಯಲ್ಲಿ ನಿಯೋಜನೆಯ ಮೇರೆಗೆ ಮುಂದುವರೆಸಲಾಗಿರುತ್ತದೆ. ಇವರ ಒಂದು ವರ್ಷದ ನಿಯೋಜನಾ ಅವಧಿಯು ದಿನಾಂಕ: 24.9.2002ಕ್ಕೆ ಮುಕ್ತಾಯಗೊಂಡಿರುತ್ತದೆ. ಮಹಾಲೇಖಪಾಲರು ಕ್ರಮಸಂಖ್ಯೆ (3) ರಲ್ಲಿ ಓದಲಾದ ದಿನಾಂಕ: 14.7.2003ರ ತಮ್ಮ ಪತ್ರದಲ್ಲಿ ಶ್ರೀ ಸಿ. ಎಸ್. ಪ್ರತಿನಿಧಿ ಇವರ ನಿಯೋಜನೆಯನ್ನು ಮುಂದುವರೆಸಿರುವ ಬಗ್ಗೆ ಹೊರಡಿಸಿರುವ ಆದೇಶವನ್ನು ಕಳುಹಿಸಿಕೊಡುವಂತೆ ಕೋರಿರುತ್ತಾರೆ.

ಈ ಮಧ್ಯೆ ಕ್ರಮ ಸಂಖ್ಯೆ (4) ಮತ್ತು (5) ರಲ್ಲಿ ಓದಲಾಗಿರುವ ದಿನಾಂಕ: 12.9.2003ರ ಅಧಿಸೂಚನೆಗಳಲ್ಲಿ ಶ್ರೀ ಸಿ. ಎಸ್. ಪ್ರತಿನಿಧಿ, ಕಾರ್ಯಪಾಲಕ ಅಭಿಯಂತರರು. ಲೋಕೋಪಯೋಗಿ ಇಲಾಖೆ ಇವರ ಸಚಿವಾಲಯದಲ್ಲಿನ ನಿಯೋಜನಾ ಅವಧಿಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ಮುಕ್ತಾಯಗೊಳಿಸಲಾಗಿರುತ್ತದೆ. ಹಾಗೂ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ವಿಶೇಷಾಧಿಕಾರಿ ಹಾಗೂ ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ ಹುದ್ದೆಯನ್ನು ಕರ್ನಾಟಕ ಸರ್ಕಾರ ಸಚಿವಾಲಯ (ವೃಂದ ಮತ್ತು ನೇಮಕಾತಿ) ನಿಯಮ 1992 ರನ್ವಯ ವೇತನ ಶ್ರೇಣಿ ರೂ. 7400-13120ರ ಅಧೀನ ಕಾರ್ಯದರ್ಶಿ ಹುದ್ದೆ ಎಂದು ನಿಮ್ನೀಕರಿಸಿ ಈ ಹುದ್ದೆಯಲ್ಲಿ ಶ್ರೀ ಕೆ. ಎಸ್. ನಾಗರಾಜ್, ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಲೋಕೋಪಯೋಗಿ ಇಲಾಖೆ ಇವರನ್ನು ಮರುಸ್ಥಳ ನಿಯುಕ್ತಿಗೊಳಿಸಲಾಗಿರುತ್ತದೆ.

ಈ ಹಿನ್ನೆಲೆಯಲ್ಲಿ ಶ್ರೀ ಸಿ. ಎಸ್. ಪ್ರತಿನಿಧಿ, ಕಾರ್ಯಪಾಲಕ ಅಭಿಯಂತರರು ಇವರು ಕಾರ್ಯನಿರ್ವಹಿಸುತ್ತಿದ್ದ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ವಿಶೇಷಾಧಿಕಾರಿ ಹಾಗೂ ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ ಹುದ್ದೆಯನ್ನು ದಿನಾಂಕ: 25.9.2002 ರಿಂದ ದಿನಾಂಕ: 12.9.2003 ರವರೆಗೆ ಮಾತ್ರ ಮುಂದುವರೆಸುವ ಬಗ್ಗೆ ಪರಿಶೀಲಿಸಲಾಗಿದ್ದು, ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 75 ಸಸಿವಿ 2003, ಬೆಂಗಳೂರು, ದಿನಾಂಕ: 23ನೇ ಅಕ್ಟೋಬರ್ 2003**

ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿನ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ವಿಶೇಷಾಧಿಕಾರಿ ಹಾಗೂ ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ ಹುದ್ದೆಯನ್ನು (ಶ್ರೀ ಸಿ. ಎಸ್. ಪ್ರತಿನಿಧಿ, ಕಾರ್ಯಪಾಲಕ ಅಭಿಯಂತರರು ಇವರು ಕಾರ್ಯನಿರ್ವಹಿಸುತ್ತಿದ್ದ ಹುದ್ದೆ) ದಿನಾಂಕ: 25.9.2002 ರಿಂದ ದಿನಾಂಕ: 12.9.2003 ರವರೆಗೆ ಮುಂದುವರೆಸಲು ಮಂಜೂರಾತಿ ನೀಡಲಾಗಿದೆ.

ಸದರಿ ಆದೇಶವನ್ನು ಆರ್ಥಿಕ ಇಲಾಖೆಯು ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10.7.1996 ರಂತೆ ಸಹಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು. ಪಿ. ಪ್ರಭು**

ಪಿ.ಆರ್. 1392 ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ಸೇವೆಗಳು-2).

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ :** ಬೆಂಗಳೂರು ಪೂರ್ವ ತಾಲ್ಲೂಕ್- ಕೃಷ್ಣರಾಜಪುರಂನಲ್ಲಿ ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ಉಪ ವಿಭಾಗವನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ :** 1) ಅಧಿಸೂಚನೆ ಸಂ. ಕಂಇ: 58: ಭೂದಾಪೂ: 1998 ದಿನಾಂಕ: 15.11.01.

2) ಬೆಂಗಳೂರು ಜಿಲ್ಲಾ ಪಂಚಾಯತ್‌ನ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಯವರ ಪತ್ರಸಂ. ಬೆಂಜಿಪಂ: ಹೊತಾ: 01-02 ದಿನಾಂಕ: 21.11.2001.

3) ಜಿಲ್ಲಾಧಿಕಾರಿಗಳು ಬೆಂಗಳೂರು ಜಿಲ್ಲೆ ಇವರ ಪತ್ರ ಸಂ. ಸಿಬ್ಬಂದಿ 1: ಸಿಆರ್; 131:00 ದಿನಾಂಕ: 21.11.01.

4) ಮುಖ್ಯ ಇಂಜಿನಿಯರ್ ಗ್ರಾಮೀಣಾಭಿವೃದ್ಧಿ ಇಂಜಿನಿಯರಿಂಗ್ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ ಮುಇಂ:ಗ್ರಾಇಂಇ: ಸಿ9 ದಿನಾಂಕ: 01-02 ದಿನಾಂಕ: 19.3.02, 25.7.02, 24.9.02, 28.7.03.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರ.ಸಂ. (1)ರ ದಿನಾಂಕ: 15.11.01ರ ಅಧಿಸೂಚನೆಯಲ್ಲಿ ಸರ್ಕಾರವು ಬೆಂಗಳೂರು ದಕ್ಷಿಣ ತಾಲ್ಲೂಕಿನ ಸರಹದ್ದುಗಳನ್ನು ಪುನರ್ ರಚಿಸಿ ಹೊಸದಾಗಿ "ಬೆಂಗಳೂರು ಪೂರ್ವತಾಲ್ಲೂಕು" ಕೃಷ್ಣರಾಜಪುರಂ ಕೇಂದ್ರ ತಾಲ್ಲೂಕನ್ನಾಗಿ ರಚಿಸಿರುತ್ತದೆ. ಆದರನ್ವಯ ತಾಲ್ಲೂಕಿಗೆ ಬೇಕಾಗುವ ಜಿಲ್ಲಾ ಪಂ. ಇಂಜಿನಿಯರಿಂಗ್ ಉಪ ವಿಭಾಗ ಕಚೇರಿಯನ್ನು ಅಗತ್ಯ ಸಿಬ್ಬಂದಿಯೊಂದಿಗೆ ಸೃಜಿಸುವಂತೆ

ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ ಜಿಲ್ಲಾ ಪಂ. ಬೆಂಗಳೂರು ಇವರು ಮೇಲೆ ಓದಲಾದ ಕ್ರ.ಸಂ. (2)ರಲ್ಲಿ ವರದಿ ಮಾಡಿರುತ್ತಾರೆ. ಮೇಲೆ ಓದಲಾದ ಕ್ರ.ಸಂ. (3)ರ ದಿನಾಂಕ: 21.11.01ರ ಪತ್ರದಲ್ಲಿ ಜಿಲ್ಲಾಧಿಕಾರಿ ಬೆಂಗಳೂರು ಜಿಲ್ಲೆ ಇವರು ಸಹ ಕೃಷ್ಣರಾಜಪುರಂ ತಾಲ್ಲೂಕಿನಲ್ಲಿ ತಾಲ್ಲೂಕು ಮಟ್ಟದ ಕಚೇರಿಗಳನ್ನು ಆಯಾ ಇಲಾಖೆಗಳು ಹೊಸದಾಗಿ ಸೃಜಿಸಬೇಕಾಗಿದೆಯೆಂದೂ ತಿಳಿಸಿರುತ್ತಾರೆ.

ಈ ಬಗ್ಗೆ ಪರಿಶೀಲಿಸಿ ಸೂಕ್ತ ಪ್ರಸ್ತಾವನೆ ಕಳುಹಿಸಿಕೊಡುವಂತೆ ಮುಖ್ಯ ಇಂಜಿನಿಯರ್, ಗ್ರಾಮೀಣಾಭಿವೃದ್ಧಿ ಇಂಜಿನಿಯರಿಂಗ್ ಇಲಾಖೆ, ಬೆಂಗಳೂರು ಇವರನ್ನು ಕೋರಲಾಗಿ ಅವರು ಮೇಲೆ ಓದಲಾದ ಕ್ರ.ಸಂ. (4)ರ ದಿನಾಂಕ: 19.3.02ರ ಪತ್ರದಲ್ಲಿ ಬೆಂಗಳೂರು ಪೂರ್ವ ತಾಲ್ಲೂಕು ಹೊಸದಾಗಿ ರಚನೆಯಾಗಿರುವುದರಿಂದ ಅಲ್ಲಿ ತಾಲ್ಲೂಕು ಮಟ್ಟದ ಕಚೇರಿ ಅವಶ್ಯಕತೆ ಇರುವುದರಿಂದ ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ಉಪ ವಿಭಾಗದ ಕಛೇರಿಯನ್ನು ಅಲ್ಲಿಗೆ ಅಗತ್ಯವಿರುವ ಸಿಬ್ಬಂದಿಯೊಂದಿಗೆ ಮಂಜೂರು ಮಾಡಲು ಶಿಫಾರಸ್ಸು ಮಾಡಿದ್ದರು. ನಂತರ ದಿನಾಂಕ: 25.7.02ರ ಪತ್ರದಲ್ಲಿ ಈ ಬಗ್ಗೆ ಮುಖ್ಯ ಇಂಜಿನಿಯರ್‌ರವರು, ಬೆಂಗಳೂರು ಪೂರ್ವ ತಾಲ್ಲೂಕಿಗೆ ಹೊಸದಾಗಿ ಉಪ ವಿಭಾಗವನ್ನು ಸೃಜಿಸುವ ಬದಲು ಮಡಿಕೇರಿ ಯಾಂತ್ರಿಕ ಉಪ ವಿಭಾಗದಲ್ಲಿ ಇರುವ ಜೀಪು ಮತ್ತು ರಿಗ್ ಯಂತ್ರವು ಬಹಳ ಹಳೆಯದಾಗಿದ್ದು ಜೀಪ್ ದುರಸ್ಥಿಯಾಗದೆ ಹರಾಜು ಮಾಡಿರುವುದರಿಂದ ಮತ್ತು ರಿಗ್ ಯಂತ್ರವನ್ನು ಹಾಸನ ಯಂತ್ರಾಗಾರಕ್ಕೆ ದುರಸ್ಥಿಗಾಗಿ ಕಳುಹಿಸಿರುವುದರಿಂದ, ಈ ಯಾಂತ್ರಿಕ ಉಪವಿಭಾಗವು ಯಾವುದೇ ಕೆಲಸವಿಲ್ಲದೆ ನಿಷ್ಕ್ರೀಯವಾಗಿದ್ದು, ಬೆಂಗಳೂರು ಪೂರ್ವ ತಾಲ್ಲೂಕಿಗೆ ಹೊಸದಾಗಿ ಉಪವಿಭಾಗವನ್ನು ಸೃಜಿಸುವ ಬದಲು ಮಡಿಕೇರಿ ಯಾಂತ್ರಿಕ ಉಪವಿಭಾಗವನ್ನೇ ಹುದ್ದೆಯ ಸಮೇತ ಬೆಂಗಳೂರು ಪೂರ್ವ ಉಪ ವಿಭಾಗವಾಗಿ ಸ್ಥಳಾಂತರಿಸುವುದು ಸೂಕ್ತವೆಂದು ವರದಿ ಮಾಡಿದ್ದರು ಮತ್ತು ಮಡಿಕೇರಿ ಯಾಂತ್ರಿಕ ಉಪವಿಭಾಗದ ಆರು ಹುದ್ದೆಗಳನ್ನು ಉಳಿದು ಅಗತ್ಯವಿರುವ ಇನ್ನು ಆರು ಹುದ್ದೆಗಳನ್ನು ಸೃಜಿಸಬೇಕಾಗುತ್ತದೆ ಎಂದು ವರದಿ ಮಾಡಿದ್ದರು.

ಸರ್ಕಾರವು ಮುಖ್ಯ ಇಂಜಿನಿಯರ್, ಗ್ರಾಮೀಣಾಭಿವೃದ್ಧಿ ಇಂಜಿನಿಯರಿಂಗ್ ಇಲಾಖೆ, ಬೆಂಗಳೂರು ಇವರ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ, ಬೆಂಗಳೂರು ಪೂರ್ವ ತಾಲ್ಲೂಕಿಗೆ ಹೊಸದಾಗಿ ಇಂಜಿನಿಯರಿಂಗ್ ಉಪವಿಭಾಗವನ್ನು ಹುದ್ದೆಗಳ ಸ್ಥಳಾಂತರದ ಮೂಲಕ ಸೃಜಿಸಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ ಸಂಖ್ಯೆ: ಗ್ರಾಅಪ 60 ಜಿಪಅ 02 ದಿನಾಂಕ: 29ನೇ ಅಕ್ಟೋಬರ್ 2003**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ ಬೆಂಗಳೂರು ಪೂರ್ವ ತಾಲ್ಲೂಕಿಗೆ ಹೊಸದಾಗಿ ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ಉಪ ವಿಭಾಗವನ್ನು ಈ ಕೆಳಕಂಡ ಹುದ್ದೆಗಳನ್ನು ಸ್ಥಳಾಂತರ ಮಾಡುವ ಮೂಲಕ ಸೃಜಿಸಲು ಸರ್ಕಾರವು ಆದೇಶಿಸಿದೆ.

| | | | |
|---|---|---|---|
| 1. | ಸಹಾಯಕ ಕಾರ್ಯಪಾಲಕ ಇಂಜಿನಿಯರ್ | -1 | |
| 2. | ಸಹಾಯಕ ಇಂಜಿನಿಯರ್ | -1 | |
| 3. | ಪ್ರಥಮ ದರ್ಜೆ ಸಹಾಯಕರು | -1 | (ಮಡಿಕೇರಿಯಿಂದ ಸ್ಥಳಾಂತರಗೊಳಿಸುವುದು) |
| 4. | ದ್ವಿತೀಯ ದರ್ಜೆ ಸಹಾಯಕರು | -1 | |
| 5. | ಬೆರಳಚ್ಚುಗಾರರು | -1 | |
| 6. | ಡಿ ಗ್ರೂಪ್ | -1 | |
| | ಒಟ್ಟು | -6 | |
| 7. | ಕಿರಿಯ ಇಂಜಿನಿಯರ್ | -3 | (ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ಉಪ ವಿಭಾಗ ಬೆಂಗಳೂರು ದಕ್ಷಿಣ ಇಲ್ಲಿಗೆ ಮಂಜೂರಾಗಿರುವ 7 ಕಿರಿಯ ಇಂಜಿನಿಯರ್ ಹುದ್ದೆಗಳ ಪೈಕಿ 3 ಕಿರಿಯ ಇಂಜಿನಿಯರ್ ಹುದ್ದೆಗಳನ್ನು ಸ್ಥಳಾಂತರಿಸುವುದು.) |

ಸದರಿ ಹುದ್ದೆಗಳನ್ನು ಸ್ಥಳಾಂತರಿಸುವ ಬಗ್ಗೆ ಆರ್ಥಿಕ ಇಲಾಖೆಯು (ಜಿಪಂ) ಟಿಪ್ಪಣಿ ಸಂಖ್ಯೆ ಆಇ 1817 ವೆ-6 2003 ದಿನಾಂಕ: 4.9.03ರ ಸಹಮತದೊಂದಿಗೆ ಸದರಿ ಆದೇಶವನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ. ಹೊನ್ನಪ್ಪನಾಯಕ್**

ಪಿ.ಆರ್. 1393

ಸರ್ಕಾರದ ಅಧೀನ ಕಾರ್ಯದರ್ಶಿ (ಸೇವೆಗಳು-ಎ)

ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆ.

**ವಿಷಯ :** ಹಾವೇರಿ ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗದಲ್ಲಿ 1992-93ನೇ ಸಾಲಿನಲ್ಲಿ ಸಿಮೆಂಟ್ ಸಾಗಾಣಿಕೆ ವೆಚ್ಚದಲ್ಲಿ ನಡೆದಿರುವ ಅವ್ಯವಹಾರಕ್ಕೆ ಕಾರಣರಾದ ಅಧಿಕಾರಿ:ನೌಕರರ ವಿರುದ್ಧದ ಜಂಟಿ ಇಲಾಖಾ ವಿಚಾರಣೆ ಆಪಾದಿತ ಅಧಿಕಾರಿ: ನೌಕರರಾದ ಶ್ರೀ ವಿ. ಎಲ್. ಮಾಳದ್‌ಕರ್, ಅಂದಿನ ಕಾರ್ಯಪಾಲಕ ಇಂಜಿನಿಯರ್, ಶ್ರೀ ಹೆಚ್. ಆರ್. ಚನ್ನಗಿರಿ, ಅಂದಿನ ಉಗ್ರಾಣಪಾಲಕ ಮತ್ತು ಶ್ರೀ ಸಿ. ಪಿ. ಚಿದಾನಂದಪ್ಪ ಅಂದಿನ ಲೆಕ್ಕಾಧೀಕ್ಷಕ ಇವರುಗಳನ್ನು ಅವರ ಮೇಲಿನ ಆರೋಪಗಳಿಂದ ದೋಷಮುಕ್ತಗೊಳಿಸುವ ಬಗ್ಗೆ-ಆದೇಶ.

**ಓದಲಾಗಿದೆ :**
1) ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಧಾರವಾಡ ಇವರ ಪತ್ರ ಸಂಖ್ಯೆ ಧಾಜಿಪಂ: ಮುಲೆಅ: ಲೆಪವಿ: 95: 94-95 ದಿನಾಂಕ: 29.4.95
2) ಶ್ರೀ ವಿ. ಎಲ್. ಮಾಳದ್‌ಕರ್, ಅಂದಿನ ಕಾರ್ಯಪಾಲಕ ಇಂಜಿನಿಯರ್, ಶ್ರೀ ಹೆಚ್. ಆರ್. ಚನ್ನಗಿರಿ, ಅಂದಿನ ಉಗ್ರಾಣಪಾಲಕ ಮತ್ತು ಶ್ರೀ ಸಿ. ಪಿ. ಚಿದಾನಂದಪ್ಪ ಅಂದಿನ ಲೆಕ್ಕಾಧೀಕ್ಷಕ ಇವರುಗಳಿಗೆ ದೋಷಾರೋಪಣಾ ಪಟ್ಟಿಯೊಂದಿಗೆ ಹೊರಡಿಸಿರುವ ಕಾರಣ ಕೇಳುವ ನೋಟಿಸ್ ಸಂಖ್ಯೆ: ಗ್ರಾಅಪ 189 ಇಎನ್‌ಕ್ಯೂ 95 ದಿನಾಂಕ: 6.3.96 ಮತ್ತು 18.3.2000.

3) ಶ್ರೀ ಹೆಚ್. ಆರ್. ಚನ್ನಗಿರಿ, ಅಂದಿನ ಉಗ್ರಾಣಪಾಲಕ ಮತ್ತು ಶ್ರೀ ವಿ. ಎಲ್. ಮಾಳದ್‌ಕರ್, ಅಂದಿನ ಕಾರ್ಯಪಾಲಕ ಇಂಜಿನಿಯರ್ ಇವರ ದಿನಾಂಕ: 30.7.96, 21.3.2000, 27.7.96 ಮತ್ತು 27.5.2000 ಲಿಖಿತ ಹೇಳಿಕೆಗಳು.
4) ಆದೇಶ ಸಂಖ್ಯೆಗ್ರಾಅಪ 189 ಇಎನ್‌ಕ್ಯೂ 95 ದಿನಾಂಕ: 3.1.02.
5) ವಿಚಾರಣಾಧಿಕಾರಿಗಳ ದಿನಾಂಕ: 16.8.03ರ ವರದಿ.

**ಪ್ರಸ್ತಾವನೆ:**

ಹಾವೇರಿ ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗದಲ್ಲಿ ಕೆಲಸ ನಿರ್ವಹಿಸುತ್ತಿದ್ದ ಶ್ರೀ ವಿ. ಎಲ್. ಮಾಳದ್‌ಕರ್, ಅಂದಿನ ಕಾರ್ಯಪಾಲಕ ಇಂಜಿನಿಯರ್, ಶ್ರೀ ಹೆಚ್. ಆರ್. ಚನ್ನಗಿರಿ, ಅಂದಿನ ಉಗ್ರಾಣಪಾಲಕ ಮತ್ತು ಶ್ರೀ ಸಿ. ಪಿ. ಚಿದಾನಂದಪ್ಪ ಅಂದಿನ ಲೆಕ್ಕಾಧೀಕ್ಷಕ (ಪ್ರಸ್ತುತ ನಿವೃತ್ತಿ ಹೊಂದಿದ್ದಾರೆ) ಇವರು 1992-93ನೇ ಸಾಲಿನಲ್ಲಿ ತಮ್ಮ ಅಧಿಕಾರ ದುರುಪಯೋಗಪಡಿಸಿಕೊಂಡು ಮೆ. ಅಶೋಕ ಟ್ರಾನ್ಸ್‌ಪೋರ್ಟ್ಸ್, ಹುಬ್ಬಳ್ಳಿ ಇವರು 1,000 ಮೆಟ್ರಿಕ್ ಟನ್ ಸಿಮೆಂಟ್ ಚೀಲಗಳನ್ನು ಹುಬ್ಬಳ್ಳಿಯಿಂದ ಹಾವೇರಿಗೆ ಸಾಗಾಣಿಕೆ ಮಾಡಿದ್ದರೂ ಅದನ್ನು ವಾಡಿಯಿಂದ ಹಾವೇರಿಗೆ ಸಾಗಾಣಿಕೆ ಮಾಡಿದ್ದೆಂದು ತೋರಿಸಿ 3,85,250 ರೂ.ಗಳ ಹೆಚ್ಚಿನ ಸಾಗಾಣಿಕೆ ವೆಚ್ಚವನ್ನು ಪಾವತಿಸಿ ಸರ್ಕಾರಕ್ಕೆ ಆರ್ಥಿಕ ನಷ್ಟವುಂಟು ಮಾಡಿದ್ದರೆಂದು ತಿಳಿಸುತ್ತಾ, ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಧಾರವಾಡ ಇವರು ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಪತ್ರದಲ್ಲಿ ಸದರಿಯವರ ವಿರುದ್ಧ ಜಂಟಿ ಇಲಾಖಾ ವಿಚಾರಣೆಯನ್ನು ನಡೆಸಲು ಕರಡು ದೋಷಾರೋಪಣಾಪಟ್ಟಿಯೊಂದಿಗೆ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿದ್ದರು.

ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ ಮೇಲ್ಕಂಡ ಅಧಿಕಾರಿ:ನೌಕರರ ವಿರುದ್ಧ ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ 1957ರ ನಿಯಮ 11 ಹಾಗೂ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 214ರನ್ವಯ ಇಲಾಖಾ ವಿಚಾರಣೆ ಹೂಡಿ ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಕಾರಣ ಕೇಳುವ ನೋಟಿಸ್‌ನೊಂದಿಗೆ ಆರೋಪಪಟ್ಟಿ ಜಾರಿ ಮಾಡಲಾಗಿತ್ತು. ಆಪಾದಿತ ಅಧಿಕಾರಿ: ನೌಕರರು ತಮ್ಮ ಮೇಲಿನ ಆರೋಪಗಳಿಗೆ ಸಂಬಂಧಿಸಿದಂತೆ ಮೇಲೆ ಓದಲಾದ ಕ್ರಮ ಸಂಖ್ಯೆ (3)ರಂತೆ ತಮ್ಮ ಲಿಖಿತ ಹೇಳಿಕೆಗಳನ್ನು ಸಲ್ಲಿಸಿ ತಮ್ಮ ಮೇಲಿನ ಆರೋಪಗಳನ್ನು ನಿರಾಕರಿಸಿದ್ದರೂ, ಶ್ರೀ ಸಿ. ಪಿ. ಚಿದಾನಂದಪ್ಪ ಇವರಿಗೆ ನೋಟೀಸ್ ಜಾರಿಯಾಗಿದ್ದರು ಅವರು ತಮ್ಮ ಲಿಖಿತ ಹೇಳಿಕೆ ಸಲ್ಲಿಸಿರುವುದಿಲ್ಲ. ಸದರಿಯವರ ಲಿಖಿತ ಹೇಳಿಕೆಗಳನ್ನು ಸರ್ಕಾರವು ಪರಿಶೀಲಿಸಿ ಅವುಗಳು ಸಮರ್ಪಕವಾಗಿಲ್ಲವೆಂದು ಕಂಡು ಬಂದುದರಿಂದ ಮತ್ತು ಆಪಾದಿತ ಅಧಿಕಾರಿ:ನೌಕರರು ಆರೋಪಿತ ದುರ್ನಡತೆಯನ್ನು ಎಸಗಿದ್ದಾರೆಂದು ದಾಖಲೆಗಳಿಂದ ಮೇಲ್ನೋಟಕ್ಕೆ ಕಂಡುಬಂದುದರಿಂದ ಆಪಾದಿತರ ಮೇಲಿನ ಆಪಾದನೆಗಳ ಬಗ್ಗೆ ಸತ್ಯಾಂಶವನ್ನು ಅರಿಯಲು ಪ್ರಕರಣದಲ್ಲಿ ವಿವರವಾದ ಇಲಾಖಾ ವಿಚಾರಣೆ ನಡೆಸಲು ನಿರ್ಧರಿಸಿ ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ಆದೇಶದಲ್ಲಿ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಹಾವೇರಿ ಇವರನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ಉಪಕಾರ್ಯದರ್ಶಿ, ಜಿಲ್ಲಾ ಪಂಚಾಯತ್, ಹಾವೇರಿ ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿತ್ತು. ಅದರಂತೆ ವಿಚಾರಣಾಧಿಕಾರಿಗಳು ಪ್ರಕರಣದಲ್ಲಿ ವಿವರವಾದ ವಿಚಾರಣೆಯನ್ನು ನಡೆಸಿ ಮೇಲೆ ಓದಲಾದ ಕ್ರಮ ಸಂಖ್ಯೆ (5)ರಂತೆ ವಿಚಾರಣೆ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ್ದರು.

ಆಪಾದಿತರಲ್ಲಿ ಒಬ್ಬರಾದ ಶ್ರೀ ಸಿ. ಪಿ. ಚಿದಾನಂದಪ್ಪ ಇವರು ದಿನಾಂಕ: 30.8.96 ರಂದು ನಿಧನ ಹೊಂದಿದ್ದು, ಉಳಿದ ಇಬ್ಬರು ಆಪಾದಿತರ ಮೇಲೆ ಇರುವ ಆಪಾದನೆಗಳ ಬಗ್ಗೆ ವಿಚಾರಣಾಧಿಕಾರಿಗಳು ವಿಚಾರಣೆ ಮಾಡಿದ್ದಾರೆ. ವಿಚಾರಣಾಧಿಕಾರಿಗಳು ಪ್ರಕರಣದಲ್ಲಿನ ಸಾಕ್ಷಿದಾರರ ಹೇಳಿಕೆ ಹಾಗೂ ದಾಖಲೆಗಳನ್ನು ಪರಿಗಣಿಸಿ ಆಪಾದಿತರು ಸಿಮೆಂಟ್ ಸಾಗಾಣಿಕೆ ವೆಚ್ಚವನ್ನು ನಿಯಮಾನುಸಾರವಾಗಿ ಪಾವತಿಸಿರುವುದಾಗಿ ಹಾಗೂ ಇವರಿಂದ ಸರ್ಕಾರಕ್ಕೆ ಯಾವುದೇ ನಷ್ಟವುಂಟಾಗಿರುವುದಿಲ್ಲವೆಂದು ತಿಳಿದುಬರುವುದರಿಂದ ಆಪಾದಿತರ ವಿರುದ್ಧ ಮಾಡಲಾಗಿದ್ದ ಆರೋಪವು ಸಾಬೀತಾಗಿರುವುದಿಲ್ಲವೆಂದು ವರದಿ ಮಾಡಿರುತ್ತಾರೆ.

ಆಗಿನ ಮುಖ್ಯ ಲೆಕ್ಕಾಧಿಕಾರಿಗಳು, ಜಿಲ್ಲಾ ಪಂಚಾಯತ್, ಧಾರವಾಡ ಇವರ ಕಾರ್ಯಾಲಯದ ತಾಂತ್ರಿಕ ಲೆಕ್ಕ ಪರಿಶೋಧನ ತಂಡಕ್ಕೆ ಸಂಬಂಧಿಸಿದ ಕಡತಗಳನ್ನು ಪೂರೈಸದೆ ಇರುವುದರಿಂದ ಸಿಮೆಂಟ್ ಸಾಗಾಣಿಕೆಗಾಗಿ ಹೆಚ್ಚುವರಿಯಾಗಿ ಪಾವತಿ ಮಾಡಿರುವ ಆರೋಪವನ್ನು ಆಪಾದಿತರ ಮೇಲೆ ಹೊರಿಸಲಾಗಿದ್ದು, ಹೀಗೆ ಹೊರಿಸಲಾಗಿರುವ ಆರೋಪವನ್ನು ಆಂತರಿಕ ಲೆಕ್ಕ ಪರಿಶೋಧನ ವರದಿಯ ಆಧಾರದ ಮೇಲೆಯೇ ರಚಿಸಲಾಗಿದ್ದು, ಈ ವರದಿಗೆ ಅನುಸರಣೆಯನ್ನು ಸಲ್ಲಿಸಿದ ನಂತರ ಲೆಕ್ಕ ಪರಿಶೋಧನ ವರದಿಯನ್ನು ಹೊರಡಿಸಿದ ಪ್ರಾಧಿಕಾರವು ಅನುಸರಣಾ ವರದಿಯನ್ನು ಒಪ್ಪಿಕೊಂಡಿದ್ದು, ಈ ಅಂಶವನ್ನು ವಿಚಾರಣೆಗೆ ಹಾಜರಾದ ಹೆಚ್ಚುವರಿ ಸಾಕ್ಷಿದಾರರು ಸಹಾ ಪ್ರತಿಪಾದಿಸಿರುವುದಾಗಿ, ಹಾಗೂ ಇದರಿಂದ ಸರ್ಕಾರಕ್ಕೆ ಯಾವುದೇ ನಷ್ಟವುಂಟಾಗಿರುವುದಿಲ್ಲವೆಂದು ತಿಳಿಸಿರುವ ವಿಚಾರಣಾಧಿಕಾರಿಗಳ ವರದಿಯನ್ನು ಸರ್ಕಾರ ಒಪ್ಪಿ ಪ್ರಕರಣದಲ್ಲಿನ ಆಪಾದಿತರಾದ ಶ್ರೀ ವಿ. ಎಲ್. ಮಾಳದ್‌ಕರ್, ಅಂದಿನ ಕಾರ್ಯಪಾಲಕ ಇಂಜಿನಿಯರ್, ಶ್ರೀ ಹೆಚ್. ಆರ್. ಚನ್ನಗಿರಿ, ಅಂದಿನ ಉಗ್ರಾಣಪಾಲಕ ಇವರ ಮೇಲಿನ ಆರೋಪಗಳಿಂದ ದೋಷಮುಕ್ತಗೊಳಿಸಲು ಹಾಗೂ ನಿಧನಹೊಂದಿರುವ ಶ್ರೀ ಸಿ. ಪಿ. ಚಿದಾನಂದಪ್ಪ, ಅಂದಿನ ಲೆಕ್ಕಾಧೀಕ್ಷಕ ಇವರ ಮೇಲೆ ಆದೇಶಿಸಿರುವ ವಿಚಾರಣೆಯನ್ನು ಕೈಬಿಡಲು ಸರ್ಕಾರವು ನಿರ್ಣಯಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ ಸಂಖ್ಯೆ: ಗ್ರಾಅಪ 189 ಇಎನ್‌ಕ್ಯೂ 95 ಬೆಂಗಳೂರು, ದಿನಾಂಕ: 27ನೇ ಅಕ್ಟೋಬರ್ 2003**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಹಾವೇರಿ ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗದಲ್ಲಿ 1992-93ನೇ ಸಾಲಿನಲ್ಲಿ ಸಿಮೆಂಟ್ ಸಾಗಾಣಿಕೆ ವೆಚ್ಚದಲ್ಲಿ ನಡೆದಿರುವ ಅವ್ಯವಹಾರಕ್ಕೆ ಕಾರಣರಾದ ಶ್ರೀ ವಿ. ಎಲ್. ಮಾಳದ್‌ಕರ್, ಅಂದಿನ ಕಾರ್ಯಪಾಲಕ ಇಂಜಿನಿಯರ್ (ಪ್ರಸ್ತುತ ನಿವೃತ್ತ) ಮತ್ತು ಶ್ರೀ ಹೆಚ್. ಆರ್. ಚನ್ನಗಿರಿ, ಅಂದಿನ ಉಗ್ರಾಣಪಾಲಕ (ಪ್ರಸ್ತುತ ನಿವೃತ್ತ) ಇವರುಗಳ ಮೇಲೆ ಮಾಡಲಾಗಿದ್ದ ಆರೋಪಗಳನ್ನು ಕೈಬಿಟ್ಟು ಅವರನ್ನು ದೋಷಮುಕ್ತರನ್ನಾಗಿಸಿದೆ. ಹಾಗೂ ಶ್ರೀ ಸಿ. ಪಿ.

ಚಿದಾನಂದಪ್ಪ ಅಂದಿನ ಲೆಕ್ಕಾಧೀಕ್ಷಕ ಇವರು ನಿಧನ ಹೊಂದಿರುವುದರಿಂದ ಅವರ ಮೇಲೆ ಆದೇಶಿಸಿದ್ದ ವಿಚಾರಣೆಯನ್ನು ಕೈಬಿಡಲು ಸರ್ಕಾರವು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ. ಹೊನ್ನಪ್ಪ ನಾಯಕ್**

ಪಿ.ಆರ್. 1394

ಸರ್ಕಾರದ ಅಧೀನ ಕಾರ್ಯದರ್ಶಿ (ಸೇವೆಗಳು-ಎ)

ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆ.

## ಸಮಾಜ ಕಲ್ಯಾಣ ಸಚಿವಾಲಯ

**ವಿಷಯ :** ಯೋಜನಾ ಸಮನ್ವಯಾಧಿಕಾರಿಗಳಿಗೆ ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳಿಂದ ಪರಿಶಿಷ್ಟ ವರ್ಗಗಳ ಕಲ್ಯಾಣ ಕಾರ್ಯಕ್ರಮಗಳನ್ನು ಹಸ್ತಾಂತರಿಸುವ ಬಗ್ಗೆ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ :** 1) ಸರ್ಕಾರಿ ಆದೇಶ ಸಂಖ್ಯೆ: ಸಕಇ 142 ಪಕಸೆ 99, ದಿನಾಂಕ: 23.6.1999

2) ನಿರ್ದೇಶಕರ ಪತ್ರ ಸಂಖ್ಯೆ: ಪವಕನಿ/ಸಿಬ್ಬಂದಿ/ ಸಿಆರ್-6/2003-04, ದಿನಾಂಕ: 6.5.2003.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ದಿನಾಂಕ: 23.6.1999ರ ಸರ್ಕಾರಿ ಆದೇಶದಲ್ಲಿ ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖೆಯಲ್ಲಿನ ಎಲ್ಲಾ ಯೋಜನೆಗಳನ್ನು ಹಾಗೂ ಯೋಜನೇತರ ಕಾರ್ಯಕ್ರಮಗಳನ್ನು ಸಮರ್ಪಕವಾಗಿ ಅನುಷ್ಠಾನಗೊಳಿಸಬೇಕಾಗಿರುವುದರಿಂದ ಪರಿಶಿಷ್ಟ ವರ್ಗಗಳ ವಿದ್ಯಾರ್ಥಿನಿಲಯಗಳು, ಆಶ್ರಮ ಶಾಲೆಗಳು ಹಾಗೂ ಮಹಿಳಾ ಕಲ್ಯಾಣ ಕೇಂದ್ರಗಳು ಹಾಗೂ ಜಿಲ್ಲಾ ಯೋಜನೆ ಸಮನ್ವಯಾಧಿಕಾರಿಗಳನ್ನು ಪರಿಶಿಷ್ಟ ವರ್ಗಗಳ ನಿರ್ದೇಶನಾಲಯದ ನೇರನಿಯಂತ್ರಣಕ್ಕೆ ಒಳಪಡಿಸಿ, ಜಿಲ್ಲಾ ಮಟ್ಟದಲ್ಲಿ ಪರಿಶಿಷ್ಟ ವರ್ಗಗಳ ಯೋಜನೆ ಹಾಗೂ ಯೋಜನೇತರ ಲೆಕ್ಕ ಶೀರ್ಷಿಕೆ 2225-02 ಮತ್ತು 4225-02 ರಡಿಯಲ್ಲಿ ಅನುಷ್ಠಾನಗೊಳಿಸುತ್ತಿರುವ ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳು ಹಾಗೂ ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳು ಪರಿಶಿಷ್ಟ ವರ್ಗಗಳ ಕಾರ್ಯಕ್ರಮಗಳಿಗೆ ಸಂಬಂಧಿಸಿದ ಪರಿಶಿಷ್ಟ ವರ್ಗಗಳ ಕಲ್ಯಾಣ ನಿರ್ದೇಶನಾಲಯದ ನೇರ ನಿಯಂತ್ರಣಕ್ಕೆ ಒಳಪಟ್ಟು ಆದೇಶಿಸಲಾಗಿತ್ತು.

ಮೇಲೆ ಓದಲಾದ ಪತ್ರ (2)ರಲ್ಲಿ ನಿರ್ದೇಶಕರು, ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖೆ ಇವರು ಮೈಸೂರು, ಕೊಡಗು, ದಕ್ಷಿಣ ಕನ್ನಡ ಉಡುಪಿ, ಚಿಕ್ಕಮಗಳೂರು ಬೆಳಗಾಂ, ರಾಯಚೂರು, ಚಾಮರಾಜನಗರ ಮತ್ತು ಚಿತ್ರದುರ್ಗ ಜಿಲ್ಲೆಗಳಲ್ಲಿ ಯೋಜನಾ ಸಮನ್ವಯ ಅಧಿಕಾರಿಗಳು/ ಜಿಲ್ಲಾ ಪರಿಶಿಷ್ಟ ವರ್ಗಗಳ ಕಲ್ಯಾಣ ಅಧಿಕಾರಿಗಳು ಸ್ವತಂತ್ರವಾಗಿ ಕಾರ್ಯನಿರ್ವಹಿಸುತ್ತಿದ್ದು, ಈ ಹುದ್ದೆಗಳು ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿ ಹುದ್ದೆಗೆ ಸಮಾನವಾದ ಹುದ್ದೆಗಳಾಗಿರುತ್ತವೆ. ಆದ್ದರಿಂದ ದಿನಾಂಕ: 23.6.1999ರ ಆದೇಶದಲ್ಲಿ ಸೂಚಿಸಿರುವಂತೆ ಮತ್ತೆ ಆದೇಶ ಹೊರಡಿಸುವಂತೆ ಕೋರಿರುತ್ತಾರೆ. ಆದ್ದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಸಕಇ 253 ಪವಯೋ 2003, ಬೆಂಗಳೂರು, ದಿನಾಂಕ: 29ನೇ ಸೆಪ್ಟೆಂಬರ್ 2003**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸುವಂತೆ ಸರ್ಕಾರದ ಆದೇಶ ಸಂಖ್ಯೆ: 142 ಪಕಸೆ 99 ದಿನಾಂಕ: 23.6.99ನ್ನು ಮಾರ್ಪಡಿಸಿ, ಜಿಲ್ಲಾ ಮಟ್ಟದಲ್ಲಿ ಹಾಗೂ ತಾಲ್ಲೂಕು ಮಟ್ಟದಲ್ಲಿ ಪರಿಶಿಷ್ಟ ವರ್ಗಗಳ ಯೋಜನೆ ಹಾಗೂ ಯೋಜನೇತರ ಲೆಕ್ಕ ಶೀರ್ಷಿಕೆ 2225-02 ಮತ್ತು 4225-02 ರಡಿಯಲ್ಲಿ ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳು ಹಾಗೂ ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳು ಅನುಷ್ಠಾನಗೊಳಿಸುತ್ತಿರುವ ಪರಿಶಿಷ್ಟ ವರ್ಗಗಳ ಕಾರ್ಯಕ್ರಮಗಳಿಗೆ ಸಂಬಂಧಿಸಿದ ಎಲ್ಲಾ ಕಾರ್ಯಗಳನ್ನು ಈ ತಕ್ಷಣ ಜಾರಿಗೆ ಬರುವಂತೆ ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖೆಯ ಜಿಲ್ಲಾ ಕಛೇರಿಗಳು ಕಾರ್ಯನಿರ್ವಹಿಸುತ್ತಿರುವ ಜಿಲ್ಲೆಗಳಲ್ಲಿ ಸಂಪೂರ್ಣವಾಗಿ ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳಿಂದ ಜಿಲ್ಲಾ ಪರಿಶಿಷ್ಟ ವರ್ಗಗಳ ಕಲ್ಯಾಣಾಧಿಕಾರಿಗಳು/ ಯೋಜನಾ ಸಮನ್ವಯಾಧಿಕಾರಿಗಳಿಗೆ ವರ್ಗಾಯಿಸುವಂತೆ ಆದೇಶಿಸಿದೆ. ಇತರೆ ಜಿಲ್ಲೆಗಳಲ್ಲಿ ಹಾಲಿ ಇರುವ ಆದೇಶಗಳನ್ವಯ ಸಂಬಂಧಿಸಿದ ಸಮಾಜ ಕಲ್ಯಾಣ ಇಲಾಖೆಯ ಅಧಿಕಾರಿಗಳು ಕಾರ್ಯನಿರ್ವಹಿಸುವುದು. ಅದರಂತೆ ಈ ಆದೇಶವನ್ನು ಅನುಷ್ಠಾನಗೊಳಿಸಿ ಸರ್ಕಾರಕ್ಕೆ ವರದಿ ಸಲ್ಲಿಸುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ಪ್ರಾಣದೇವ**

ಪಿ.ಆರ್. 1395

ಸರ್ಕಾರದ ಅಧೀನ ಕಾರ್ಯದರ್ಶಿ,

ಸಮಾಜ ಕಲ್ಯಾಣ ಇಲಾಖೆ.

## ಲೋಕೋಪಯೋಗಿ ಸಚಿವಾಲಯ

**ವಿಷಯ :** ಬೆಳಗಾವಿಯ ಕೋಟೆ ಪ್ರದೇಶದ ಸ.ನಂ. 345 ರಲ್ಲಿರುವ 1.63 ಎಕರೆ ಜಮೀನನ್ನು ಕಾಡಾ ಬಂಗಲೆ ಸಮೇತ ಶ್ರೀ ರಾಮಕೃಷ್ಣ ಆಶ್ರಮ, ಬೆಳಗಾವಿ ಇವರಿಗೆ ಗುತ್ತಿಗೆ ನೀಡುವ ಬಗ್ಗೆ.

**ಉಲ್ಲೇಖ :** 1) ಸರ್ಕಾರದ ಆದೇಶ ಸಂಖ್ಯೆ: ಲೋಇ 104 ಬಿಎಂಎಸ್ 2001 ದಿನಾಂಕ: 24.10.2001.

2) ಸರ್ಕಾರದ ಆದೇಶ ಸಂಖ್ಯೆ: ಲೋಇ 104 ಬಿಎಂಎಸ್ 2001 ದಿನಾಂಕ: 30.1.2002.

3) ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ಉತ್ತರ), ಧಾರವಾಡ, ಇವರ ಪತ್ರ ಸಂಖ್ಯೆ: ಸಿಇಎನ್: ಸಿ-16: ಕಸಂ-39:01-02: 11782: ದಿನಾಂಕ: 12.3.2003.

**ಪ್ರಸ್ತಾವನೆ:**

ಶ್ರೀ ರಾಮಕೃಷ್ಣ ಮಿಷನ್, ಬೇಲೂರು ಮಠ, ಪಶ್ಚಿಮ ಬಂಗಾಳ ಇವರಿಗೆ ಬೆಳಗಾವಿಯ ಕೋಟೆ ಪ್ರದೇಶದ ಸ.ನಂ. 345 ರಲ್ಲಿನ 3642 ಚ.ಮಿ. (36 ಗುಂಟೆ) ಜಮೀನನ್ನು ಅದರಲ್ಲಿನ ಎರಡು ಕಟ್ಟಡಗಳನ್ನೊಳಗೊಂಡಂತೆ 30 ವರ್ಷಗಳ ಅವಧಿಗೆ, ವಾರ್ಷಿಕ ರೂ. 1,00,000.00ಗಳ ಬಾಡಿಗೆ ಆಧಾರದ ಮೇರೆಗೆ ಕೆಲವಾರು ಷರತ್ತುಗಳಿಗೊಳಪಟ್ಟು, ಮೇಲೆ ಓದಲಾದ (1)ರ ಆದೇಶದಲ್ಲಿ ಮಂಜೂರು ಮಾಡಲಾಗಿತ್ತು.

ಶ್ರೀ ರಾಮಕೃಷ್ಣ ಮಿಷನ್ ಆಶ್ರಮದವರು ಸರ್ಕಾರಕ್ಕೆ ಸಲ್ಲಿಸಿದ ಮನವಿಯಲ್ಲಿ ಸದರಿ ಆಶ್ರಮವು ಇನ್ನೂ ಬಾಲ್ಯಾವಸ್ಥೆಯಲ್ಲಿರುವುದರಿಂದ ಆಶ್ರಮಕ್ಕೆ ಮಂಜೂರು ಮಾಡಿದ ಜಮೀನಿಗೆ ಸರ್ಕಾರವು ನಿಗದಿಪಡಿಸಿರುವ ವಾರ್ಷಿಕ ಬಾಡಿಗೆಯು ಬಹಳ ಅಧಿಕವಾಗಿದೆಯೆಂದು ತಿಳಿಸಿ, ವಿಧಿಸಿರುವ ಬಾಡಿಗೆ ಪಾವತಿಗೆ ಸಂಪೂರ್ಣ ವಿನಾಯಿತಿ ನೀಡಬೇಕೆಂದು ವಿನಂತಿಸಿದ್ದರ ಹಿನ್ನೆಲೆಯಲ್ಲಿ ಸದರಿಯವರ ಮನವಿಯನ್ನು ಪರಿಗಣಿಸಿ ಮೇಲೆ ಓದಲಾದ (2)ರ ಆದೇಶದಲ್ಲಿ ಹಿಂದಿನ ಸರ್ಕಾರಿ ಆದೇಶವನ್ನು ಭಾಗಶಃ ಮಾರ್ಪಡಿಸಿ, ಮಂಜೂರು ಮಾಡಲಾಗಿದ್ದ ಜಮೀನಿನ ಹಿಂದಿನ ಬಾಡಿಗೆ ದರವನ್ನು ವಾರ್ಷಿಕ ರೂ. 1,00,000.00 ದಿಂದ ರೂ. 25,000.00ಕ್ಕೆ ನಿಗದಿ ಪಡಿಸಲಾಯಿತು.

ಮುಂದುವರೆದು, ಶ್ರೀ ರಾಮಕೃಷ್ಣ ಮಿಷನ್ ಆಶ್ರಮ, ಬೆಳಗಾವಿ ಇವರು, ಸರ್ಕಾರವು ಈ ಹಿಂದೆ ಆಶ್ರಮಕ್ಕೆ ಈಗಾಗಲೇ ನೀಡಿರುವ 3642 ಚ.ಮಿ. (36 ಗುಂಟೆ) ಜಮೀನಿನಲ್ಲಿ ಸಂಸ್ಥೆಯು ಧಾರ್ಮಿಕ, ಸಾಂಸ್ಕೃತಿಕ, ಶೈಕ್ಷಣಿಕ, ಮತ್ತು ಸಾಮಾಜಿಕ ಸೇವಾ ಕಾರ್ಯ ಚಟುವಟಿಕೆಗಳನ್ನು ನಡೆಸಲು ಜಾಗ ಸಾಕಾಗದೆ ಇರುವುದರಿಂದ ಸದರಿ ಜಮೀನಿಗೆ ಹೊಂದಿಕೊಂಡಿರುವ 1.63 ಎಕರೆ ಜಮೀನನ್ನು ಅದರಲ್ಲಿರುವ "ಕಾಡಾ" ಬಂಗಲೆ ಸಮೇತ ವಾರ್ಷಿಕ ರೂ. 50,000.00ಗಳ ಬಾಡಿಗೆ ಆಧಾರದ ಮೇಲೆ 30 ವರ್ಷಗಳ ಅವಧಿಗೆ ಗುತ್ತಿಗೆ ನೀಡಬೇಕೆಂದು ಕೋರಿ ಸರ್ಕಾರಕ್ಕೆ ಮನವಿ ಸಲ್ಲಿಸಿರುತ್ತಾರೆ.

ಮೇಲ್ಕಂಡ ಎಲ್ಲಾ ಅಂಶಗಳನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಈ ಮುಂದಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲೋಇ 104 ಬಿಎಂಎಸ್ 2001, ಬೆಂಗಳೂರು, ದಿನಾಂಕ: 28ನೇ ಅಕ್ಟೋಬರ್ 2003**

ಶ್ರೀ ರಾಮಕೃಷ್ಣ ಮಿಷನ್ ಆಶ್ರಮ, ಬೇಲೂರು ಮಠ, ಪಶ್ಚಿಮ ಬಂಗಾಳ ಇವರಿಗೆ ಬೆಳಗಾವಿಯ ಕೋಟೆ ಪ್ರದೇಶದ ಸ.ನಂ. 345 ರಲ್ಲಿನ 3642 ಚ.ಮಿ (36 ಗುಂಟೆ) ಜಾಗವನ್ನು ಈಗಾಗಲೇ ಗುತ್ತಿಗೆ ಆಧಾರದ ಮೇಲೆ ಮಂಜೂರು ಮಾಡಲಾಗಿದ್ದು ಇದಕ್ಕೆ ಹೊಂದಿಕೊಂಡಿರುವ 1.63 ಎಕರೆ ಜಮೀನನ್ನು ಸಹಾ ಅದರಲ್ಲಿರುವ "ಕಾಡಾ" ಬಂಗಲೆ ಸಮೇತ ವಾರ್ಷಿಕ ರೂ. 60,000.00 (ಅರವತ್ತು ಸಾವಿರ ರೂಪಾಯಿಗಳು ಮಾತ್ರ) ಗಳ ಬಾಡಿಗೆ ಆಧಾರದ ಮೇಲೆ 30 ವರ್ಷಗಳ ಅವಧಿಗೆ ಗುತ್ತಿಗೆ ನೀಡಲು ಈ ಕೆಳಕಂಡ ಷರತ್ತಿಗೊಳಪಟ್ಟು ಸರ್ಕಾರದ ಮಂಜೂರಾತಿ ನೀಡಿ ಆದೇಶಿಸಿದೆ.

1. ಗುತ್ತಿಗೆ ಕರಾರು ಮಂಜೂರು ಮಾಡಿ ಕಾರ್ಯಗತಗೊಳಿಸಿದ ದಿನಾಂಕದಿಂದ ಗುತ್ತಿಗೆ ಅವಧಿಯು 30 ವರ್ಷಗಳ ಅವಧಿಗೆ ಇರುತ್ತದೆ (ಅಂದರೆ ದಿನಾಂಕ:
2. ಗುತ್ತಿಗೆದಾರರು ಕಂಟೋನ್ಮೆಂಟ್ ಸ.ನಂ. 345 ರಲ್ಲಿರುವ 1.63 ಎಕರೆ ಖಾಲಿ ಜಮೀನು ಮತ್ತು ಕಾಡಾ ಬಂಗಲೆ ಸೇರಿ ಪ್ರತಿ ವರ್ಷ ರೂ. 60,000.00 (ಅರವತ್ತು ಸಾವಿರ ರೂಪಾಯಿಗಳು ಮಾತ್ರ) ರಂತೆ ದಿನಾಂಕ: ಪ್ರತಿ ಆರ್ಥಿಕ ವರ್ಷದ ಮಾರ್ಚ್ 10 ರೊಳಗಾಗಿ ಪಾವತಿಸತಕ್ಕದ್ದು.
3. ಗುತ್ತಿಗೆದಾರರು ಎರಡು ವರ್ಷಗಳು ಕ್ರಮವಾಗಿ ಬಾಡಿಗೆಯನ್ನು ಪಾವತಿಸದಿದ್ದಲ್ಲಿ ಸರ್ಕಾರವು ತಂತಾನೆ ಜಮೀನು, ಬಂಗಲೆಯನ್ನು ಹಿಂದಕ್ಕೆ ಪಡೆಯುತ್ತದೆ ಮತ್ತು ಗುತ್ತಿಗೆಯ ಕರಾರನ್ನು ರದ್ದುಗೊಳಿಸಲಾಗುವುದು.
4. ಗುತ್ತಿಗೆದಾರರು ಈ ಜಮೀನಿನಲ್ಲಿ ಅಗತ್ಯವಿರುವ ಕಟ್ಟಡಗಳನ್ನು ಕಟ್ಟಿಕೊಳ್ಳಬಹುದು. ಹಾಗೂ ಗುತ್ತಿಗೆ ಅವಧಿ ಮುಗಿದ ನಂತರ ಸದರಿ ಸ.ನಂ. ನಲ್ಲಿರುವ ಜಮೀನು ಮತ್ತು ಎಲ್ಲಾ ಆಸ್ತಿಗಳನ್ನು ರಾಜ್ಯ ಸರ್ಕಾರದಿಂದ ಯಾವುದೇ ಪರಿಹಾರವನ್ನು ಕೇಳದೆ ವರ್ಗಾಯಿಸತಕ್ಕದ್ದು.
5. ಶ್ರೀ ರಾಮಕೃಷ್ಣ ಆಶ್ರಮದವರು ಈ ಜಮೀನು ಮತ್ತು ಬಂಗಲೆಯನ್ನು ಧಾರ್ಮಿಕ ಮತ್ತು ಸಾಮಾಜಿಕ ಸೇವೆಗಳಿಗಾಗಿ ಮಾತ್ರ ಉಪಯೋಗಿಸಿಕೊಳ್ಳತಕ್ಕದ್ದು.
6. ಈ ಜಮೀನು ಮತ್ತು ಬಂಗಲೆಯನ್ನು ಮೇಲಿನ ಉದ್ದೇಶಕ್ಕಲ್ಲದೇ ಬೇರೆ ಯಾವುದೇ ಉದ್ದೇಶಕ್ಕೆ ಉಪಯೋಗಿಸತಕ್ಕದಲ್ಲ.
7. ಗುತ್ತಿಗೆದಾರರು ಜಮೀನು ಮತ್ತು ಬಂಗಲೆಯನ್ನು ಯಾವುದೇ ವಾಣಿಜ್ಯ ಉದ್ದೇಶಗಳಿಗೆ ಅಥವಾ ಯಾವುದೇ ವ್ಯಕ್ತಿಗೆ ಅಥವಾ ಯಾವುದೇ ಸಂಘ ಅಥವಾ ಸಂಸ್ಥೆ ಇತ್ಯಾದಿಗಳಿಗೆ ಒಳ ಗುತ್ತಿಗೆಗೆ ಅಥವಾ ಒಳ ಬಾಡಿಗೆಗೆ ನೀಡತಕ್ಕದ್ದಲ್ಲ.
8. ಗುತ್ತಿಗೆದಾರರು ಕಂಟೋನ್ಮೆಂಟ್ ಮಂಡಳಿಯಲ್ಲಿ ಜಾರಿಯಲ್ಲಿರುವ ಕಾನೂನು ಮತ್ತು ಬೈಲಾಗಳನ್ನು ಪಾಲಿಸತಕ್ಕದ್ದು.
9. ಗುತ್ತಿಗೆದಾರರ ಹೊರ ಚಟುವಟಿಕೆಗಳನ್ವಯ ಉದ್ಭವಿಸಬಹುದಾದಂತಹ ಯಾವುದೇ ವ್ಯಾಜ್ಯಗಳಿಗೆ ಸರ್ಕಾರವು ಜವಾಬ್ದಾರರಾಗುವುದಿಲ್ಲ. ಗುತ್ತಿಗೆದಾರರು ಯಾವುದೇ ಪ್ರತ್ಯೇಕ ಸಂಘ ಅಥವಾ ಸಂಸ್ಥೆಗಳಲ್ಲಿ ಪ್ರವೇಶಿಸಿದಲ್ಲಿ ಅದರಿಂದ ಉಂಟಾಗುವ ಯಾವುದೇ ಪರಿಣಾಮಗಳಿಗೆ ಗುತ್ತಿಗೆದಾರರೇ ಹೊಣೆಗಾರರಾಗುತ್ತಾರೆ. ಹಾಗೂ ಅಂಥ ಮೌಲ್ಯಗಳಿಗೆ ಮತ್ತು ಅಂತಹ ವ್ಯಾಜ್ಯಗಳ ಪರಿಣಾಮಗಳನ್ನು ಗುತ್ತಿಗೆದಾರರೇ ಎಲ್ಲಾ ಜವಾಬ್ದಾರಿ ಮೇಲೆ ನಿರ್ವಹಿಸತಕ್ಕದ್ದು.
10. ಗುತ್ತಿಗೆದಾರರು ಯಾವುದೇ ರಾಜಕೀಯ ಚಟುವಟಿಕೆಗಳನ್ನು ಈ ಜಮೀನು ಮತ್ತು ಬಂಗಲೆಗೆ ತರತಕ್ಕದ್ದಲ್ಲ. ಮತ್ತು ಈ ಜಮೀನಿನ ಯಾವುದೇ ಭಾಗ ಅಥವಾ ಬಂಗಲೆಯಲ್ಲಾಗಲೀ ಯಾವುದೇ ಅಪರಾಧ, ಗಲಭೆ ಅಥವಾ ಅಪಾಯಕಾರಿ ಉದ್ದಿಮೆ, ವ್ಯಾಪಾರ ಅಥವಾ ವೃತ್ತಿ ಇವುಗಳಿಂದ ಆವರಣದಲ್ಲಿರುವ ವ್ಯಕ್ತಿಗಳಿಗೆ ಅಥವಾ ಅದರ ಪರಿಸರಕ್ಕೆ ತೊಂದರೆ ಉಂಟಾಗುವ ರೀತ್ಯಾ ನಡೆದುಕೊಳ್ಳತಕ್ಕದ್ದಲ್ಲ.

11. ಗುತ್ತಿಗೆದಾರರೇ ಸ್ಥಳೀಯ ಪ್ರಾಧಿಕಾರಗಳಿಗೆ ಗುತ್ತಿಗೆ ನೀಡಲಾದ ಜಮೀನು ಮತ್ತು ಬಂಗಲೆ/ ಮುಂದೆ ನಿರ್ಮಿಸಲಾಗುವ ಕಟ್ಟಡಗಳಿಗೆ ಎಲ್ಲಾ ತೆರಿಗೆ ಮತ್ತು ಕರಗಳನ್ನು ಪಾವತಿಸತಕ್ಕದ್ದು.
12. ಕಾರ್ಯಪಾಲಕ ಇಂಜಿನಿಯರ್, ಲೋಕೋಪಯೋಗಿ ಇಲಾಖೆ, ಬೆಳಗಾವಿ ಇವರಿಗೆ ತೃಪ್ತಿಕರವಾಗುವ ರೀತಿಯಲ್ಲಿ, ಜಮೀನು, ಬಂಗಲೆಯ ಮತ್ತು ಆವರಣವನ್ನು ಈ ಗುತ್ತಿಗೆಯ ಅವಧಿಯಲ್ಲಿ ಚೊಕ್ಕಟವಾಗಿಡುವುದು ಗುತ್ತಿಗೆದಾರರ ಜವಾಬ್ದಾರಿಯಾಗಿರುತ್ತದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಲೋಇ 327 ಆಕೋ 3: 2002 ದಿನಾಂಕ: 29.8.2002, ಕಂದಾಯ ಇಲಾಖೆಯ ಟಿಪ್ಪಣಿ ಸಂಖ್ಯೆ: ಆರ್‌ಡಿ 65 ಎಲ್‌ಜಿಎಲ್ 2002 ದಿನಾಂಕ: 13.1.2003 ಹಾಗೂ ಜಲಸಂಪನ್ಮೂಲ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ನೀಇ 18 ಸಿಎಂಜಿ 2002 (ಭಾ) ದಿನಾಂಕ: 24.4.2002 ರ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ಕೆ. ನರಸಿಂಹಲು**

ಸರ್ಕಾರದ ಅಧೀನ ಕಾರ್ಯದರ್ಶಿ,

ಲೋಕೋಪಯೋಗಿ ಇಲಾಖೆ (ಕಟ್ಟಡಗಳು).

ಪಿ.ಆರ್. 1400

## ಕಾರ್ಮಿಕ ಸಚಿವಾಲಯ

**ವಿಷಯ :** ಉದ್ಯೋಗ ಮತ್ತು ತರಬೇತಿ ಇಲಾಖೆ ಉದ್ಯೋಗ ವಿಭಾಗದಲ್ಲಿನ ಶ್ರೀ ಡಿ. ಸೋಮಶೇಖರ್, ಸಹಾಯಕ ನಿರ್ದೇಶಕರು, ವಿಶಿಷ್ಟ ವೃತ್ತಿ ಮತ್ತು ಕಾರ್ಯನಿರ್ವಾಹಕ ಉದ್ಯೋಗ ವಿನಿಮಯ ಕೇಂದ್ರ, ಬೆಂಗಳೂರು ಇವರನ್ನು ಸೇವೆಯಿಂದ ವಜಾ ಮಾಡುವ ಬಗ್ಗೆ.

**ಓದಲಾಗಿದೆ :**
1) ನಿರ್ದೇಶಕರು, ಉದ್ಯೋಗ ಮತ್ತು ತರಬೇತಿ ಇಲಾಖೆ ಇವರ ಪತ್ರ ಸಂಖ್ಯೆ: ಡಿಇಎಕ್ಸ್:9:ಸಿಆರ್:105: 95:96, ದಿನಾಂಕ: 10.06.1996.
2) ಸರ್ಕಾರಿ ಆದೇಶ ಸಂಖ್ಯೆ: ಕಾಇ 104 ಇಟಿಎಕ್ಸ್ 96, ದಿನಾಂಕ: 03.08.96
3) ಸರ್ಕಾರಿ ಪತ್ರ ಸಂಖ್ಯೆ: ಕಾಇ 104 ಇಟಿಎಕ್ಸ್ 96, ದಿನಾಂಕ: 02.05.97
4) ಸರ್ಕಾರಿ ಆದೇಶ ಸಂಖ್ಯೆ: ಕಾಇ 104 ಇಟಿಎಕ್ಸ್ 96, ದಿನಾಂಕ: 27.08.97
5) ಸರ್ಕಾರಿ ಆದೇಶ ಸಂಖ್ಯೆ: ಕಾಇ 104 ಇಟಿಎಕ್ಸ್ 96, ದಿನಾಂಕ: 17.11.97
6) ಸರ್ಕಾರಿ ಆದೇಶ ಸಂಖ್ಯೆ: ಕಾಇ 104 ಇಟಿಎಕ್ಸ್ 96, ದಿನಾಂಕ: 18.02.98
7) ಅಪರ ನಿಬಂಧಕರು (ವಿಚಾರಣೆ 3), ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ: Lok/ARE-3/Enq.15/97-98, ದಿನಾಂಕ: 16.07.2001.
8) ಸರ್ಕಾರಿ ಪತ್ರ ಸಂಖ್ಯೆ: ಕಾಇ 104 ಇಟಿಎಕ್ಸ್ 96, ದಿನಾಂಕ: 05.10.2001.
9) ಶ್ರೀ ಡಿ. ಸೋಮಶೇಖರ್, ಸಹಾಯಕ ನಿರ್ದೇಶಕರು, ಇವರು ದಿನಾಂಕ: 05.11.2001 ರಂದು ಮತ್ತು 03.01.2003ರಲ್ಲಿ ಸಲ್ಲಿಸಿರುವ ಸಂರಕ್ಷಣಾ ಹೇಳಿಕೆ.

**ಪ್ರಸ್ತಾವನೆ:**

ನಿರ್ದೇಶಕರು, ಉದ್ಯೋಗ ಮತ್ತು ತರಬೇತಿ ಇಲಾಖೆ ಇವರು ಮೇಲೆ (1)ರಲ್ಲಿ ಓದಲಾದ ದಿನಾಂಕ: 10.06.1996ರ ಪತ್ರದಲ್ಲಿ ಶ್ರೀ ಡಿ. ಸೋಮಶೇಖರ್, ಸಹಾಯಕ ನಿರ್ದೇಶಕರು, ಇವರು ಬೆಂಗಳೂರು ವಿಶ್ವವಿದ್ಯಾನಿಲಯ ಉದ್ಯೋಗ ಮಾಹಿತಿ ಮತ್ತು ಮಾರ್ಗದರ್ಶನ ಕೇಂದ್ರದಲ್ಲಿ ಉಪಮುಖ್ಯಸ್ಥರಾಗಿ ಕಾರ್ಯನಿರ್ವಹಿಸುತ್ತಿದ್ದಾಗ ಇವರು ಶ್ರೀ ಡಿ. ಆರಮುತ್ತು ಎಂಬುವರ ಸಾಕುಮಗಳಾದ ಶ್ರೀಮತಿ ಮೀನಾಕ್ಷಿ ಇವರಿಗೆ ವೈದ್ಯಕೀಯ ಸೀಟು ಕೊಡಿಸುವುದಾಗಿ ಭರವಸೆ ನೀಡಿ ಅವರಿಂದ ರೂ. 4.00 ಲಕ್ಷಗಳನ್ನು ಪಡೆದಿದ್ದು, ನಂತರ ವೈದ್ಯಕೀಯ ಸೀಟು ಕೊಡಿಸಲು ವಿಫಲರಾದಾಗ ಫಿರ್ಯಾದುದಾರರಿಗೆ ರೂ.1.50 ಲಕ್ಷಗಳನ್ನು ಮಾತ್ರ ಹಿಂದಿರುಗಿಸಿ ಉಳಿದ ಹಣಕ್ಕೆ ಅಂದರೆ ರೂ. 2.50 ಲಕ್ಷಗಳಿಗೆ ನಾಲ್ಕು ಚೆಕ್ಕುಗಳನ್ನು ನೀಡಿದ್ದು, ಸದರಿ ಚೆಕ್ಕುಗಳು ಬ್ಯಾಂಕಿನಿಂದ ಅಂಗೀಕೃತವಾಗಿರುವುದಿಲ್ಲ (Dishonoured). ಸದರಿ ಉಪಮುಖ್ಯಸ್ಥರು ಮೋಸ ಮಾಡಿದ್ದಾರೆಂದು ಆಪಾದಿಸಿರುತ್ತಾರೆ ಹಾಗೂ ಸದರಿ ಆರೋಪವು ಗಂಭೀರ ಸ್ವರೂಪದ್ದಾಗಿದ್ದು ದಂಡಾರ್ಹ ಅಪರಾಧವಾಗಿರುವುದರಿಂದ ಈ ಪ್ರಕರಣವನ್ನು ಕರ್ನಾಟಕ ಲೋಕಾಯುಕ್ತ ಅಧಿನಿಯಮದ ಪರಿಚ್ಛೇದ 7(2) ಪ್ರಕಾರ ತನಿಖೆಗಾಗಿ ಕರ್ನಾಟಕ ಲೋಕಾಯುಕ್ತ ಪ್ರಾಧಿಕಾರಕ್ಕೆ ವಹಿಸಲು ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಮೇಲೆ (2) ರಲ್ಲಿ ಓದಲಾದ ಸರ್ಕಾರಿ ಆದೇಶ ದಿನಾಂಕ: 03.08.96ರಲ್ಲಿ ಶ್ರೀ ಡಿ. ಸೋಮಶೇಖರ್, ಉಪ ಮುಖ್ಯಸ್ಥರು, ಬೆಂಗಳೂರು ವಿಶ್ವವಿದ್ಯಾನಿಲಯ ಉದ್ಯೋಗ ಮಾಹಿತಿ ಮತ್ತು ಮಾರ್ಗದರ್ಶನ ಕೇಂದ್ರ, ಇವರ ಮೇಲಿನ ಆರೋಪಗಳನ್ನು ಪರಿಶೀಲಿಸಿ ಸದರಿ ಅಧಿಕಾರಿಯವರನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1977ರ ನಿಯಮ 10(1)(ಬಿ)ರನ್ವಯ ಅಮಾನತ್ತಿನಲ್ಲಿಡಲು ಆದೇಶಿಸಲಾಗಿತ್ತು.

ಮೇಲೆ (3)ರಲ್ಲಿ ಓದಲಾದ ಸರ್ಕಾರಿ ಪತ್ರ ದಿನಾಂಕ: 02.05.97ರಲ್ಲಿ ಶ್ರೀ ಡಿ. ಸೋಮಶೇಖರ್‌ರವರಿಗೆ ಮೇಲೆ ಹೇಳಲಾದ ಆರೋಪಗಳ ಬಗ್ಗೆ ಕಾರಣ ಕೇಳುವ ನೋಟೀಸನ್ನು ದೋಷಾರೋಪಣಾ ಪಟ್ಟಿಯೊಂದಿಗೆ ಜಾರಿ ಮಾಡಲಾಗಿತ್ತು.

ಮೇಲೆ (4)ರಲ್ಲಿ ಓದಲಾದ ಸರ್ಕಾರಿ ಆದೇಶ ದಿನಾಂಕ: 27.08.97 ರಲ್ಲಿ ಶ್ರೀ ಡಿ. ಸೋಮಶೇಖರ್ ಅವರ ಅಮಾನತ್ತಿನ ಅವಧಿ 6 ತಿಂಗಳು ಮೀರಿರುವುದರಿಂದ ಸರ್ಕಾರ ಪುನರ್ ಪರಿಶೀಲಿಸಿ ಇವರ ಅಮಾನತ್ತನ್ನು ತೆರವು ಮಾಡಿ ಅವರ ವಿರುದ್ಧ ಇಲಾಖಾ ವಿಚಾರಣೆ ಬಾಕಿ ಇಟ್ಟು ತಕ್ಷಣದಿಂದ ಜಾರಿಗೆ ಬರುವಂತೆ ಇಲಾಖೆಯಲ್ಲಿ ಪುನರ್ ನೇಮಿಸಲಾಗಿತ್ತು.

ಸದರಿ ಅಧಿಕಾರಿಯು ದಿನಾಂಕ: 25.07.97ರಲ್ಲಿ ಸಲ್ಲಿಸಿದ ಲಿಖಿತ ಹೇಳಿಕೆಯಲ್ಲಿ ನೀಡಿರುವ ಕಾರಣಗಳು ತೃಪ್ತಿಕರವಾಗಿಲ್ಲದಿರುವುದರಿಂದ ಮೇಲೆ (5)ರಲ್ಲಿ ಓದಲಾದ ದಿನಾಂಕ: 17.11.97ರ ಆದೇಶದಲ್ಲಿ ಕರ್ನಾಟಕ ಲೋಕಾಯುಕ್ತರಿಂದ ವಿಚಾರಣೆ ನಡೆಸಲು ತೀರ್ಮಾನಿಸಲಾಯಿತು.

ಮೇಲೆ (6)ರಲ್ಲಿ ಓದಲಾದ ಸರ್ಕಾರಿ ಆದೇಶ ದಿನಾಂಕ: 18.02.98ರಲ್ಲಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1977ರ ನಿಯಮ 11(2) ಹಾಗೂ 11(5)ರನ್ವಯ ಸರ್ಕಾರ ಇಲಾಖಾ ವಿಚಾರಣೆ ನಡೆಸಲು ಕ್ರಮವಾಗಿ ಅಪರ ನಿಬಂಧಕರು (ವಿಚಾರಣೆ-3), ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿಯೂ ಹಾಗೂ ಅವರಿಗೆ ಹೊಂದಿಕೊಂಡಿರುವ ಅಧಿಕಾರಿಯನ್ನು (Officer attached to him) ಮಂಡನಾಧಿಕಾರಿಯನ್ನಾಗಿಯೂ ನೇಮಿಸಿ ಆದೇಶಿಸಿದೆ.

ಮೇಲೆ (7)ರಲ್ಲಿ ಓದಲಾದ ಪತ್ರದಲ್ಲಿ ಅಪರ ನಿಬಂಧಕರು (ವಿಚಾರಣೆ-3), ಕರ್ನಾಟಕ ಲೋಕಾಯುಕ್ತ ಇವರು ಶ್ರೀ ಡಿ. ಸೋಮಶೇಖರ್, ಉಪಮುಖ್ಯಸ್ಥರು, ಇವರ ಮೇಲಿನ ಆಪಾದನೆಗಳ ಬಗ್ಗೆ ವಿಚಾರಣಾಧಿಕಾರಿಯವರು ವಿವರವಾದ ವಿಚಾರಣೆ ಮಾಡಿದ ನಂತರ ಆಪಾದಿತ ಅಧಿಕಾರಿಯು ವೈದ್ಯಕೀಯ ಸೀಟು ಕೊಡಿಸುವುದಾಗಿ ದೂರುದಾರರಿಂದ ರೂ. 4.00 ಲಕ್ಷಗಳನ್ನು ಪಡೆದಿರುವರೆಂಬ ಆಪಾದನೆ ಸಾಬೀತಾಗಿರುತ್ತದೆಂದು ವಿಚಾರಣಾ ವರದಿಯಲ್ಲಿ ವರದಿ ಮಾಡಿರುತ್ತಾರೆ.

ಮೇಲೆ (8)ರಲ್ಲಿ ಓದಲಾದ ದಿನಾಂಕ: 05.10.2001ರ ಪತ್ರದಲ್ಲಿ ಶ್ರೀ ಡಿ. ಸೋಮಶೇಖರ್, ಆಪಾದಿತ ಅಧಿಕಾರಿಯವರಿಗೆ ಸದರಿ ವಿಚಾರಣಾಧಿಕಾರಿಯವರ ವಿಚಾರಣಾ ವರದಿಯ ಪ್ರತಿಯನ್ನು 2ನೇ ಕಾರಣ ಕೇಳುವ ನೋಟೀಸ್‌ನೊಂದಿಗೆ ವಿಚಾರಣಾ ವರದಿಯನ್ನು ಯಾವ ಕಾರಣದಿಂದ ಅಂಗೀಕರಿಸಬಾರದು ಎಂಬ ಬಗ್ಗೆ ವಿವರಣೆ ನೀಡುವಂತೆ ನೋಟೀಸನ್ನು ಜಾರಿ ಮಾಡಲಾಯಿತು.

ಶ್ರೀ ಡಿ. ಸೋಮಶೇಖರ್‌ರವರು ಮೇಲೆ (9)ರಲ್ಲಿ ಓದಲಾದ ದಿನಾಂಕ: 05.11.2001 ಮತ್ತು 03.01.2003ರಲ್ಲಿ ಸಲ್ಲಿಸಿದ ಸಂರಕ್ಷಣಾ ಹೇಳಿಕೆಯಲ್ಲಿ ತಮ್ಮ ಮೇಲೆ ಮಾಡಿರುವ ಆಪಾದನೆಗಳನ್ನು ನಿರಾಕರಿಸಿರುತ್ತಾರೆ. ಸದರಿ ಅಧಿಕಾರಿಯು ಸಲ್ಲಿಸಿದ ಸಂರಕ್ಷಣಾ ಹೇಳಿಕೆಯಲ್ಲಿ ಪರಿಗಣಿಸಲಾಗುವಂತಹ ಯಾವ ಅಂಶಗಳೂ ಇರುವುದಿಲ್ಲ.

ಮೇಲೆ ತಿಳಿಸಿದ ವಿವರಗಳಂತೆ ಶ್ರೀ ಡಿ. ಸೋಮಶೇಖರ್‌ರವರು ಮೋಸದ ಪ್ರಕರಣದಲ್ಲಿ ಭಾಗಿಯಾಗಿದ್ದು ಸರ್ಕಾರಿ ನೌಕರರಾಗಲು ಅನರ್ಹರಾಗಿರುತ್ತಾರೆ. ಈ ಪ್ರಕರಣವನ್ನು ಸರ್ಕಾರವು ಕೂಲಂಕುಷವಾಗಿ ಪರಿಶೀಲಿಸಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1977ರ ನಿಯಮ 8(Viii)ಅಡಿಯಲ್ಲಿ ಶ್ರೀ ಡಿ. ಸೋಮಶೇಖರ್ ಇವರನ್ನು ಸೇವೆಯಿಂದ ವಜಾ ಮಾಡುವ ದಂಡನೆಯನ್ನು ವಿಧಿಸಲು ತೀರ್ಮಾನಿಸಿದೆ.

ಆದ್ದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಕಾಇ 104 ಇಟಿಎಕ್ಸ್ 96, ಬೆಂಗಳೂರು, ದಿನಾಂಕ: 31ನೇ ಅಕ್ಟೋಬರ್ 2003**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಲಾದ ಸನ್ನಿವೇಶದ ಹಿನ್ನೆಲೆಯಲ್ಲಿ ಶ್ರೀ ಡಿ. ಸೋಮಶೇಖರ್, ಸಹಾಯಕ ನಿರ್ದೇಶಕರು, ಇವರ ವಿರುದ್ಧ ಮಾಡಲಾದ ಆಪಾದನೆಗಳು ಲೋಕಾಯುಕ್ತರವರ ವಿಚಾರಣೆಯಿಂದ ಸಾಬೀತಾಗಿರುವುದರಿಂದ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1977ರ ನಿಯಮ 8(Viii)ರ ಅನ್ವಯ ಇವರಿಗೆ ಸರ್ಕಾರಿ ಸೇವೆಯಿಂದ ವಜಾ ಮಾಡುವ ದಂಡನೆಯನ್ನು ವಿಧಿಸಲಾಗಿದೆ ಹಾಗೂ ತಕ್ಷಣದಿಂದ ಜಾರಿಗೆ ಬರುವಂತೆ ಇವರನ್ನು ಸರ್ಕಾರಿ ಸೇವೆಯಿಂದ ವಜಾ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ಸುಬ್ರಮಣ್ಯರಾವ್**

ಪಿ.ಆರ್. 1401

ಪೀಠಾಧಿಕಾರಿ,

ಕಾರ್ಮಿಕ ಇಲಾಖೆ, (ಉದ್ಯೋಗ ಮತ್ತು ತರಬೇತಿ).

## ಶಿಕ್ಷಣ ಸಚಿವಾಲಯ

### ತಿದ್ದುಪಡಿ

### ಸಂಖ್ಯೆ: ಇಡಿ: 170: ಟಿಇಸಿ 2003 ಬೆಂಗಳೂರು, ದಿನಾಂಕ: 31ನೇ ಅಕ್ಟೋಬರ್ 2003

ಹೊಸ ಇಂಜಿನಿಯರಿಂಗ್/ ಎಂ.ಬಿ.ಎ/ ಎಂ.ಸಿ.ಎ. ಕಾಲೇಜುಗಳ ಸ್ಥಾಪನೆ, ಹಾಲಿ ಇರುವ ಕಾಲೇಜುಗಳಲ್ಲಿ ಕೋರ್ಸುಗಳನ್ನು ಹೊಸದಾಗಿ ಅಳವಡಿಸುವಿಕೆ ಮತ್ತು ಹಾಲಿ ಇರುವ ಕೋರ್ಸುಗಳಲ್ಲಿ ಇಂಟೇಕ್ ಬದಲಾವಣೆ ಇವುಗಳ ಬಗ್ಗೆ ಬಂದ ಅರ್ಜಿಗಳನ್ನು ತಪಾಸಣೆ ನಡೆಸಿ ಸರ್ಕಾರಕ್ಕೆ ಶಿಫಾರಸ್ಸು ಮಾಡಲು ಸಮಿತಿಗಳನ್ನು ರಚಿಸಲಾಗಿರುವ ಸರ್ಕಾರಿ ಆದೇಶ ಸಂಖ್ಯೆ: ಇಡಿ 138 ಟಿಇಸಿ 2002 ದಿನಾಂಕ: 13.12.2002 ರಲ್ಲಿ ಅಂಶ 1 ರಲ್ಲಿ ಕ್ರಮ ಸಂಖ್ಯೆ (2) ರಲ್ಲಿ ಈ ಕೆಳಕಂಡಂತೆ ತಿದ್ದಿ ಓದಿಕೊಳ್ಳತಕ್ಕದ್ದು.

| ಈಗ ಇರುವುದು | ತಿದ್ದುಪಡಿ ಮಾಡಿರುವುದು. |
|---|---|
| 2) ಡಾ: ಹೆಚ್. ಎನ್. ಶಿವಶಂಕರ್<br>ಪ್ರಾಂಶುಪಾಲರು,<br>ಯು. ವಿ.ಸಿ.ಇ.<br>ಬೆಂಗಳೂರು | 2) ಡಾ: ಮುರಗೇಶ್ ಮುದಲಿಯಾರ್<br>ಪ್ರಾಚಾರ್ಯರು,<br>ಬಿ.ಎಂ.ಎಸ್. ಇಂಜಿನಿಯರಿಂಗ್ ಕಾಲೇಜು,<br>ಬೆಂಗಳೂರು. |

ಹಾಗೆಯೇ ಸದರಿ ಆದೇಶದ ಅಂಶ IIIರಲ್ಲಿ ಕ್ರಮ ಸಂಖ್ಯೆ: 1 ರಲ್ಲಿ ಈ ಕೆಳಕಂಡಂತೆ ತಿದ್ದಿ ಓದಿಕೊಳ್ಳತಕ್ಕದ್ದು.

| ಈಗ ಇರುವುದು | ತಿದ್ದುಪಡಿ ಮಾಡಿರುವುದು. |
|---|---|
| 1) ಶ್ರೀ ವಿ. ಕೆ. ಕಟ್ಟಿ<br>ಜಂಟಿ ನಿರ್ದೇಶಕರು (ಆಡಳಿತ)<br>ತಾಂತ್ರಿಕ ಶಿಕ್ಷಣ ಇಲಾಖೆ.<br>ಬೆಂಗಳೂರು. | 2) ಪ್ರೊ: ಕೆ. ಬಸವರಾಜು<br>ಜಂಟಿ ನಿರ್ದೇಶಕರು (ಎ.ಟಿ.ಎಸ್)<br>ತಾಂತ್ರಿಕ ಶಿಕ್ಷಣ ನಿರ್ದೇಶನಾಲಯ,<br>ಬೆಂಗಳೂರು. |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಎಸ್. ವೇಣುಗೋಪಾಲ್**

ಪಿ.ಆರ್. 1402

ಸರ್ಕಾರದ ಅಧೀನ ಕಾರ್ಯದರ್ಶಿ,

ಶಿಕ್ಷಣ ಇಲಾಖೆ.

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

## ಅಧಿಕೃತ ಜ್ಞಾಪನ

**ಸಂಖ್ಯೆ: ಆಕುಕ 77 ಹೆಚ್‌ಎಸ್‌ಡಿ 2003 ಬೆಂಗಳೂರು, ದಿನಾಂಕ: 30ನೇ ಅಕ್ಟೋಬರ್ 2003**

**ವಿಷಯ :** 2003-04ನೇ ಸಾಲಿಗೆ ಸ್ನಾತಕೋತ್ತರ ವ್ಯಾಸಂಗಕ್ಕಾಗಿ ಸೇವಾ ನಿರತ ದಂತ ಆರೋಗ್ಯಾಧಿಕಾರಿಗಳನ್ನು ಆಯ್ಕೆ ಮಾಡುವ ಬಗ್ಗೆ.

ಕರ್ನಾಟಕ ವೈದ್ಯಕೀಯ ಕಾಲೇಜುಗಳು ಮತ್ತು ದಂತ ಕಾಲೇಜುಗಳು (ಸ್ನಾತಕೋತ್ತರ ಕೋರ್ಸುಗಳಿಗೆ ಆಯ್ಕೆ) ನಿಯಮಗಳು 1987ರ ಪ್ರಕಾರ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು ಮತ್ತು ಸ್ವಾಯತ್ತ ಸಂಸ್ಥೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಸೇವಾ ನಿರತ ದಂತ ಆರೋಗ್ಯಾಧಿಕಾರಿಗಳು 2003-04ನೇ ಸಾಲಿನ ಸ್ನಾತಕೋತ್ತರ ವ್ಯಾಸಂಗಕ್ಕಾಗಿ ಅರ್ಜಿ ಸಲ್ಲಿಸಿರುವುದನ್ನು ಪರಿಶೀಲಿಸಿ, ಈ ಆದೇಶದ ಅನುಬಂಧದಲ್ಲಿ ಅವರ ಹೆಸರಿನ ಮುಂದೆ ನಮೂದಿಸಿರುವ ಕೋರ್ಸು ಮತ್ತು ಕಾಲೇಜುಗಳಿಗೆ ಆಯ್ಕೆ ಮಾಡಲಾಗಿದೆ.

2. ಕರ್ನಾಟಕ ಸರ್ಕಾರಿ ಸೇವಾ ನಿಯಮ 7ರ ಅನುಬಂಧ-1 ರಲ್ಲಿ ಪ್ರದತ್ತವಾದ ಅಧಿಕಾರದನ್ವಯ ಸ್ನಾತಕೋತ್ತರ ವ್ಯಾಸಂಗಕ್ಕೆ ಆಯ್ಕೆಯಾದ ಸೇವಾನಿರತ ದಂತ ಆರೋಗ್ಯಾಧಿಕಾರಿಗಳಿಗೆ ಪ್ರತಿನಿಯೋಜನಾ ಸೌಲಭ್ಯವಿರುತ್ತದೆ. ಪ್ರಥಮ ಬಾರಿಗೆ ಸ್ನಾತಕೋತ್ತರ ವ್ಯಾಸಂಗಕ್ಕೆ ಆಯ್ಕೆಯಾಗಿರುವ ಸೇವಾ ನಿರತ ದಂತ ಆರೋಗ್ಯಾಧಿಕಾರಿಗಳು ಅವರುಗಳು ಆಯ್ಕೆ ಮಾಡಿರುವ ಕೋರ್ಸು ಮತ್ತು ಕಾಲೇಜಿನಲ್ಲಿ ಆಯ್ಕೆಯಾಗಿರುವ ವೈದ್ಯರುಗಳು ಅಫಿಡವಿಟ್ ಫಾರಂ-ಎ ಯನ್ನು ಭರ್ತಿ ಮಾಡಿ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳಿಗೆ ಸಲ್ಲಿಸತಕ್ಕದ್ದು.

3. ಅಲ್ಲದೆ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳು ಮತ್ತು ಸಂಬಂಧಿಸಿದ ಮೇಲಧಿಕಾರಿಗಳು ಕರ್ನಾಟಕ ಸರ್ಕಾರಿ ಸೇವಾ ನಿಯಮಗಳಲ್ಲಿ ನಿಗದಿಪಡಿಸಿರುವಂತೆ ನಮೂನೆ-19 ಅಥವಾ 19-ಎ ರನ್ವಯ ಬಾಂಡ್‌ಅನ್ನು ಪಡೆಯುವುದು.

4. ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳು ಅಥವಾ ಸಂಬಂಧಿಸಿದ ಮೇಲಧಿಕಾರಿಗಳು ಅಫಿಡವಿಟ್ ಮತ್ತು ಬಾಂಡ್‌ಗಳನ್ನು ಪಡೆದು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶಕರಿಗೆ ಕಳುಹಿಸತಕ್ಕದ್ದು. ಯಾವುದೇ ಕಾರಣಕ್ಕೂ ಮೇಲಿನ ದಾಖಲಾತಿಗಳನ್ನು ಪಡೆಯದೇ ಸ್ನಾತಕೋತ್ತರ ವ್ಯಾಸಂಗಕ್ಕೆ ಆಯ್ಕೆಯಾಗಿರುವ ಅಭ್ಯರ್ಥಿಗಳನ್ನು ಪ್ರಸ್ತುತ ಕರ್ತವ್ಯದಿಂದ ಬಿಡುಗಡೆ ಮಾಡಿದಲ್ಲಿ ಸಂಬಂಧಿಸಿದ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿ: ಮೇಲಧಿಕಾರಿಗಳು ಸರ್ಕಾರ ತೆಗೆದುಕೊಳ್ಳುವ ಕ್ರಮಕ್ಕೆ ನೇರ ಹೊಣೆಗಾರರಾಗುತ್ತಾರೆ.

5. ಈ ಅಧಿಕೃತ ಜ್ಞಾಪನದ ಅನುಬಂಧದಲ್ಲಿ ತಿಳಿಸಿರುವ ಸ್ನಾತಕೋತ್ತರ ವ್ಯಾಸಂಗಕ್ಕೆ ಆಯ್ಕೆಯಾಗಿರುವ ಸೇವಾನಿರತ ದಂತ ಆರೋಗ್ಯಾಧಿಕಾರಿಗಳು ಸ್ನಾತಕೋತ್ತರ ಕೋರ್ಸಿಗೆ ಪ್ರವೇಶ ಪಡೆದ ನಂತರ ಸರ್ಕಾರ ಪರಿಶೀಲಿಸಿ ಪ್ರತ್ಯೇಕವಾಗಿ ವ್ಯಾಸಂಗದ ರಜೆ ಅಥವಾ ಪ್ರತಿನಿಯೋಜನಾ ರಿಯಾಯಿತಿ ಸೌಲಭ್ಯ ಮಂಜೂರು ಮಾಡಲು ಕ್ರಮ ತೆಗೆದುಕೊಳ್ಳುವುದು. ಸ್ನಾತಕೋತ್ತರ ಕೋರ್ಸಿನ ಪ್ರವೇಶ ಪಡೆದ ದಿನಾಂಕದಿಂದ ಜಾರಿಗೆ ಬರುವಂತೆ ಸರ್ಕಾರದ ಮಂಜೂರಾತಿ ಇಲ್ಲದೇ ಈ ಅಭ್ಯರ್ಥಿಗಳು ವೇತನ: ರಜೆಯ ವೇತನ ಪಡೆಯಲು ಅವಕಾಶವಿರುವುದಿಲ್ಲ.

6. ಈ ಅನಧಿಕೃತ ಜ್ಞಾಪನದ ಅನುಬಂಧದಲ್ಲಿ ತಿಳಿಸಿರುವಂತೆ, ಸ್ನಾತಕೋತ್ತರ ವ್ಯಾಸಂಗಕ್ಕೆ ಆಯ್ಕೆಯಾಗಿರುವ ಸೇವಾನಿರತ ದಂತ ಆರೋಗ್ಯಾಧಿಕಾರಿಗಳು ವ್ಯಾಸಂಗಕ್ಕಾಗಿ ನಿಯೋಜಿಸಲು, ಹಾಲಿ ನಿಯಮಗಳನ್ವಯ 5 ವರ್ಷಗಳ ಕಡ್ಡಾಯ ಸೇವೆ ಸಲ್ಲಿಸಬೇಕೆಂಬ ನಿಯಮವನ್ನು ಸಡಿಲಿಸಿದೆ.

7. ಸ್ನಾತಕೋತ್ತರ ವ್ಯಾಸಂಗಕ್ಕೆ ನಿಯೋಜಿಸಿರುವ ಸೇವಾನಿರತ ದಂತ ಆರೋಗ್ಯಾಧಿಕಾರಿಗಳ ಸಂಬಳ ಹಾಗೂ ನಿಯೋಜನೆ ಭತ್ಯೆ ಬಟವಾಡೆ ಮಾಡುವ ಅಧಿಕಾರವನ್ನು ಅವರನ್ನು ನಿಯೋಜಿಸಿರುವ ಕಾಲೇಜಿಗೆ ಸಂಬಂಧಪಟ್ಟ ಜಿಲ್ಲೆಯ ಜಿಲ್ಲಾ ಶಸ್ತ್ರ ಚಿಕಿತ್ಸಕರುಗಳಿಗೆ ನೀಡಲಾಗಿರುತ್ತದೆ.

8. ಈ ಅಧಿಕೃತ ಜ್ಞಾಪನದ ಅನುಬಂಧದಲ್ಲಿ ತಿಳಿಸಿರುವ 2003-04ನೇ ಸಾಲಿನಲ್ಲಿ ಸ್ನಾತಕೋತ್ತರ ವ್ಯಾಸಂಗಕ್ಕೆ ಆಯ್ಕೆಯಾದ ಸೇವಾ ನಿರತ ದಂತ ಆರೋಗ್ಯಾಧಿಕಾರಿಗಳು ಸಂಬಂಧಪಟ್ಟ ವೈದ್ಯಕೀಯ ಕಾಲೇಜುಗಳಲ್ಲಿ ಸ್ನಾತಕೋತ್ತರ ಕೋರ್ಸಿಗೆ ಪ್ರವೇಶ ಪಡೆಯಲು ಕೊನೆಯ ದಿನಾಂಕ: 31.10.2003 ಆಗಿರುತ್ತದೆ. ಸದರಿ ಆಯ್ಕೆಗೊಂಡ ಸೇವಾನಿರತ ದಂತ ಆರೋಗ್ಯಾಧಿಕಾರಿಗಳು ಸ್ನಾತಕೋತ್ತರ ಕೋರ್ಸು ಪ್ರಾರಂಭವಾಗುವವರೆಗೆ ಯಾವ ಸ್ಥಳದಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾರೆಯೋ ಆ ಜಾಗದಲ್ಲಿ ಮುಂದುವರಿಯುವುದು ಹಾಗೂ ತದನಂತರ

ಕರ್ತವ್ಯದಿಂದ ಬಿಡುಗಡೆಗೊಳ್ಳತಕ್ಕದ್ದು. ಸಂಬಂಧಿಸಿದ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳು ಹಾಗೂ ಸಂಬಂಧಿಸಿದ ಮೇಲಧಿಕಾರಿಗಳು ಅದರಂತೆ ಕ್ರಮ ತೆಗೆದುಕೊಳ್ಳಬೇಕೆಂದು ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕಾಶೀನಾಥ ಪಟವಾಡಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

**ಅಧಿಕೃತ ಜ್ಞಾಪನಾ ಸಂಖ್ಯೆ: ಆಕುಕ 77 ಹೆಚ್‌ಎಸ್‌ಡಿ 2003 ದಿನಾಂಕ: 30ನೇ ಅಕ್ಟೋಬರ್ 2003 ಕ್ಕೆ**

**ಅನುಬಂಧ**

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು ಇಲಾಖೆಯ ಸೇವಾನಿರತ ದಂತ ಆರೋಗ್ಯಾಧಿಕಾರಿಗಳನ್ನು 2003-04ನೇ ಸಾಲಿನ ಸ್ನಾತಕೋತ್ತರ ವ್ಯಾಸಂಗದ ಆಯ್ಕೆಗೆ ದಿನಾಂಕ: 21.10.2003 ರಂದು ನಡೆದ ಸ್ಥಳ ಸಂದರ್ಶನದಲ್ಲಿ ಆಯ್ಕೆಯಾಗಿರುವ ವೈದ್ಯರ ವಿವರ:

| ಕ್ರ.ಸಂ. | ಸೇವಾ ನಿರತ ದಂತ ಆರೋಗ್ಯಾಧಿಕಾರಿ ಹೆಸರು ಮತ್ತು ಕಾರ್ಯನಿರ್ವಹಿಸುತ್ತಿರುವ ಸ್ಥಳ ಮತ್ತು ವಿಳಾಸ | ದಂತ ಆರೋಗ್ಯಾಧಿಕಾರಿಗಳು ಆಯ್ಕೆಯಾಗಿರುವ | | |
|---|---|---|---|---|
| | | ವಿಷಯ | ವೈದ್ಯಕೀಯ ವಿದ್ಯಾಲಯ | ಆಯ್ಕೆಮಾಡಿರುವ ವರ್ಗ |
| 1 | 2 | 3 | 4 | 5 |
| 1. | ಡಾ: ಆರ್. ಪ್ರಶಾಂತ್ ದಂತ ಆರೋಗ್ಯಾಧಿಕಾರಿ ಉಪ ವಿಭಾಗ ಆಸ್ಪತ್ರೆ, ರಾಮನಗರಂ ಬೆಂಗಳೂರು ಗ್ರಾ. ಜಿಲ್ಲೆ. | ಎಂಡಿಎಸ್ (ಆರ್ಥೋಡೋನ್ಸಿಯಾ) | ಸರ್ಕಾರಿ ದಂತ ವೈದ್ಯಕೀಯ ಕಾಲೇಜು, ಬೆಂಗಳೂರು | ಸಾವ |
| 2. | ಡಾ: ಮಲ್ಲಯ್ಯ ಡಿ. ಹಿರೇಮಠ್ ದಂತ ಆರೋಗ್ಯಾಧಿಕಾರಿ ಸಮುದಾಯ ಆರೋಗ್ಯ ಕೇಂದ್ರ, ಅಥಣಿ, ಬೆಳಗಾಂ ಜಿಲ್ಲೆ. | ಎಂಡಿಎಸ್ (ಪೀಡಿಯೊಡೋನ್ಸಿಯಾ) | ದಂತ ವಿಜ್ಞಾನ ಕಾಲೇಜು, ದಾವಣಗೆರೆ. | ಸಾವ |
| 3. | ಡಾ: ಕಿರಣ್‌ಕುಮಾರ್ ಎನ್. ದಂತ ಆರೋಗ್ಯಾಧಿಕಾರಿ ಜಿಲ್ಲಾ ಆಸ್ಪತ್ರೆ, ಮಡಿಕೇರಿ, ಕೊಡಗು ಜಿಲ್ಲೆ. | ಎಂಡಿಎಸ್ (ಕನ್ಸರ್‌ವೇಟಿವ್ ಡೆಂಟಿಸ್ಟ್ರಿ) | ಆರ್. ವಿ. ದಂತ ಕಾಲೇಜು ಬೆಂಗಳೂರು. | ಸಾವ |
| 4. | ಡಾ: ಗುರುಪ್ರಸಾದ್ ಸಿ. ಎನ್. ದಂತ ಆರೋಗ್ಯಾಧಿಕಾರಿ ಸಾರ್ವಜನಿಕ ಆಸ್ಪತ್ರೆ, ಬಂಗಾರಪೇಟೆ ಕೋಲಾರ ಜಿಲ್ಲೆ. | ಎಂಡಿಎಸ್ (ಪೆರಿಯೋಡೋನ್ಸಿಯಾ) | ಸರ್ಕಾರಿ ದಂತ ವೈದ್ಯಕೀಯ ಕಾಲೇಜು, ಬೆಂಗಳೂರು | ಸಾವ |
| 5. | ಡಾ: ಸೌಮ್ಯ ಕೆ. ಆರ್. ದಂತ ಆರೋಗ್ಯಾಧಿಕಾರಿ ಸಾರ್ವಜನಿಕ ಆಸ್ಪತ್ರೆ, ಗೌರಿ ಬಿದನೂರು, ಕೋಲಾರ ಜಿಲ್ಲೆ | ಎಂಡಿಎಸ್ (ಕಮ್ಯುನಿಟಿ ಡೆಂಟಿಸ್ಟ್ರಿ) | ಜೆಎಸ್‌ಎಸ್ ಡೆಂಟಲ್ ಕಾಲೇಜು, ಮೈಸೂರು. | ಸಾವ |
| 6. | ಡಾ: ಸುಮನ್ ಬಿ. ದಂತ ಆರೋಗ್ಯಾಧಿಕಾರಿ, ಸಮುದಾಯ ಆರೋಗ್ಯ ಕೇಂದ್ರ, ಕುಣಿಗಲ್ ತಾ: ತುಮಕೂರು ಜಿಲ್ಲೆ | ಎಂಡಿಎಸ್ (ಓರಲ್ ಮೆಡಿಸಿನ್) | ಬಾಪೂಜಿ ಡೆಂಟಲ್ ಕಾಲೇಜು ದಾವಣಗೆರೆ | ಸಾವ |
| 7. | ಡಾ: ಕವಿತಾ ರಘೋತ್ತಮ್ ದಂತ ಆರೋಗ್ಯಾಧಿಕಾರಿ ಸಾರ್ವಜನಿಕ ಆಸ್ಪತ್ರೆ, ಗುಂಡ್ಲುಪೇಟೆ ಚಾಮರಾಜನಗರ ಜಿಲ್ಲೆ | ಎಂಡಿಎಸ್ (ಓರಲ್ ಸರ್ಜರಿ) | ಎ.ಬಿ. ಶೆಟ್ಟಿ ಡೆಂಟಲ್ ಕಾಲೇಜು, ಮಂಗಳೂರು. | ಸಾವ |
| 8. | ಡಾ: ಕಲಾವತಿ ಎಂ. ದಂತ ಆರೋಗ್ಯಾಧಿಕಾರಿ ಸಾರ್ವಜನಿಕ ಆಸ್ಪತ್ರೆ, ನೆಲಮಂಗಲ ಬೆಂಗಳೂರು ಜಿಲ್ಲೆ. | ಎಂಡಿಎಸ್ (ಪ್ರಾಸ್ಥೋಡೋನ್ಸಿಯಾ) | ದಂತ ವೈದ್ಯಕೀಯ ಕಾಲೇಜು, ದಾವಣಗೆರೆ. | ಪಜಾ |

| 1 | 2 | 3 | 4 | 5 |
|---|---|---|---|---|
| 9. | ಡಾ: ಸುರೇಶ್ ಟಿ. ದಂತ ಆರೋಗ್ಯಾಧಿಕಾರಿ ಮೈಸೂರು ವೈದ್ಯಕೀಯ ಕಾಲೇಜು, ಮೈಸೂರು. | ಎಂಡಿಎಸ್ (ಓರಲ್ ಪೆಥಾಲಜಿ) | ಬಾಪೂಜಿ ಡೆಂಟಲ್ ಕಾಲೇಜು ದಾವಣಗೆರೆ | ಸಾವ |
| 10. | ಡಾ: ಸತ್ಯಪ್ರಕಾಶ್ ದೊಂಗಡೆ ದಂತ ಆರೋಗ್ಯಾಧಿಕಾರಿ ಸಾ ಆಸ್ಪತ್ರೆ, ನಂಜನಗೂಡು ತಾ: ಮೈಸೂರು ಜಿಲ್ಲೆ. | ಎಂಡಿಎಸ್ (ಓರಲ್ ಮೆಡಿಸಿನ್) | ಪಿ. ಎಂ. ನಾಡಗೌಡ ಡೆಂಟಲ್ ಕಾಲೇಜು ಬಾಗಲಕೋಟೆ. | ಸಾವ |

**ಕಾಶೀನಾಥ ಪಟವಾಡಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

ಪಿ.ಆರ್. 1403

## ಕಂದಾಯ ಸಚಿವಾಲಯ

**ವಿಷಯ :** ಗುಲ್ಬರ್ಗಾ ಜಿಲ್ಲೆಯ ಕಾಳಗಿ, ಹುಣಸಗಿ, ವಡಗೇರಾ, ಗುಲ್ಬರ್ಗಾ (ಉತ್ತರ), ಗುರುಮಿಟಕಲ್‌ಗೆ ವಿಶೇಷ ತಹಶೀಲ್ದಾರ್‌ರುಗಳನ್ನು ನೇಮಿಸುವ ಬಗ್ಗೆ.

**ಓದಲಾಗಿದೆ :** ಜಿಲ್ಲಾಧಿಕಾರಿಗಳು, ಗುಲ್ಬರ್ಗಾ ಜಿಲ್ಲೆ ಇವರ ಪತ್ರ ಸಂಖ್ಯೆ: ಆರ್‌ವಿ೪ ಎಡಿಎಂ:1: 2003-04, ದಿನಾಂಕ: 11.7.2003.

**ಪ್ರಸ್ತಾವನೆ:**

ರಾಜ್ಯದಲ್ಲಿ ಹೊಸ ತಾಲ್ಲೂಕುಗಳನ್ನು ರಚಿಸಲು ನೇಮಿಸಲಾಗಿರುವ ಶ್ರೀ ವಾಸುದೇವರಾವ್ ಆಯೋಗ, ಶ್ರೀ ಹುಂಡೇಕಾರ್ ಸಮಿತಿ ಹಾಗೂ ಶ್ರೀ ಗದ್ದಿಗೌಡರ್ ಸಮಿತಿಗಳು ಹೊಸ ತಾಲ್ಲೂಕುಗಳನ್ನು ರಚಿಸುವ: ಪುನರ್ವಿಂಗಡಿಸುವ ಬಗ್ಗೆ ತಮ್ಮ ಶಿಫಾರಸ್ಸು ನೀಡಿವೆ. ಸದರಿ ಶಿಫಾರಸ್ಸುಗಳ ಪೈಕಿ ಗುಲ್ಬರ್ಗಾ ಜಿಲ್ಲೆಯ ಕಾಳಗಿ, ಹುಣಸಗಿ, ವಡಗೇರಾ, ಗುಲ್ಬರ್ಗಾ (ಉತ್ತರ) ಹಾಗೂ ಗುರುಮಿಟಕಲ್‌ಗಳನ್ನು ತಾಲ್ಲೂಕು ಕೇಂದ್ರಗಳನ್ನಾಗಿ ರಚಿಸಲು ಈ ಸಮಿತಿಗಳು ಶಿಫಾರಸ್ಸು ಮಾಡಿವೆ.

ಆದರೆ ಪ್ರಸ್ತುತ ರಾಜ್ಯದಲ್ಲಿ ಯಾವುದೇ ಹೊಸ ತಾಲ್ಲೂಕುಗಳನ್ನು ರಚಿಸದೇ ಇರಲು ಹಾಗೂ ಮೇಲ್ಕಂಡ ಸಮಿತಿಗಳು ಶಿಫಾರಸ್ಸು ಮಾಡಿದ ಸ್ಥಳಗಳಲ್ಲಿ ಕೆಲಸದ ಒತ್ತಡ ಯಾವ ತಾಲ್ಲೂಕುಗಳಲ್ಲಿ ಹೆಚ್ಚು ಇದೆಯೋ ಅಂತಹ ಕಡೆ ವಿಶೇಷ ತಹಶೀಲ್ದಾರ್ ಹುದ್ದೆಗಳನ್ನು ನೇಮಕ ಮಾಡಲು ಸರ್ಕಾರ ತೀರ್ಮಾನಿಸಿದೆ. ಜೊತೆಗೆಯೇ ಸರಕಾರವು ಜಿಲ್ಲಾಧಿಕಾರಿ, ಗುಲ್ಬರ್ಗಾ ಇವರ ಪ್ರಸ್ತಾವನೆಯನ್ನು ಸಹ ಪರಿಶೀಲಿಸಿ ಕಾಳಗಿ, ಹುಣಸಗಿ, ವಡಗೇರಾ, ಗುಲ್ಬರ್ಗಾ (ಉತ್ತರ) ಹಾಗೂ ಗುರುಮಿಟಕಲ್ ಪಟ್ಟಣಗಳಿಗೆ ವಿಶೇಷ ತಹಶೀಲ್ದಾರ್‌ರುಗಳನ್ನು ನೇಮಿಸಲು ನಿರ್ಧರಿಸಿದೆ. ಈ ಹಿನ್ನೆಲೆಯಲ್ಲಿ ಈ ಕೆಳಕಂಡಂತೆ ಸರಕಾರವು ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂ೪ 09 ಎಎಸ್‌ಡಿ 2003, ಬೆಂಗಳೂರು, ದಿನಾಂಕ: 28ನೇ ಅಕ್ಟೋಬರ್ 2003**

ಪ್ರಸ್ತಾವನೆಯಲ್ಲಿ ವಿವರಿಸಲಾದ ಸಂದರ್ಭಗಳ ಹಿನ್ನೆಲೆಯಲ್ಲಿ ಗುಲ್ಬರ್ಗಾ ಜಿಲ್ಲೆಯ ಈ ಕೆಳಕಂಡ ಸ್ಥಳಗಳಿಗೆ ಅವುಗಳ ಹೆಸರಿನ ಮುಂದೆ ತಿಳಿಸಲಾದ ಜಿಲ್ಲಾಧಿಕಾರಿಗಳ ಕಛೇರಿ ಸಹಾಯಕರ ಹುದ್ದೆಗಳನ್ನು ವಿಶೇಷ ತಹಶೀಲ್ದಾರ್ ಎಂದು ಪುನರ್ನಾಮೀಕರಿಸಿ ಸ್ಥಳಾಂತರಿಸಲಾಗಿದೆ.

| ಕ್ರಮ ಸಂಖ್ಯೆ | ವಿಶೇಷ ತಹಶೀಲ್ದಾರ್‌ಯೆಂದು ನೇಮಕ ಮಾಡಿದ ಸ್ಥಳ | ಸ್ಥಳಾಂತರಿಸಲಾದ ಜಿಲ್ಲಾಧಿಕಾರಿಗಳ ಕಛೇರಿ ಸಹಾಯಕರ ಹುದ್ದೆಗಳು |
|---|---|---|
| 1) | ಕಾಳಗಿ | ಬಳ್ಳಾರಿ ಜಿಲ್ಲೆ |
| 2) | ಹುಣಸಗಿ | ಧಾರವಾಡ ಜಿಲ್ಲೆ |
| 3) | ವಡಗೇರಾ | ಹಾವೇರಿ ಜಿಲ್ಲೆ |
| 4) | ಗುಲ್ಬರ್ಗಾ (ಉತ್ತರ) | ಉತ್ತರ ಕನ್ನಡ ಜಿಲ್ಲೆ |
| 5) | ಗುರುಮಿಟಕಲ್ | ಕೊಡಗು ಜಿಲ್ಲೆ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ. ಎಸ್. ಮಹಂತೇಶಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ. (ಸೇವೆಗಳು-3)

ಪಿ.ಆರ್. 1404

## EDUCATION SECRETARIAT
## CORRIGENDUM
**No. ED 338 TPE 2003 Bangalore, dated: 31st October 2003.**

In the order portion of the Government Order No. ED 118 TPE 2001 dated: 13.07.2001 in which state level committee for processing the applications for grant of approval to the institutions offering

diploma programmes to Engineering and Technology was constituted, in Sl. No. 2 "Regional Officer of A.I.C.T.E. or his nominee" be substituted in the place of "Prof A. Sridharan, Chairman of S.W.R.C, A.I.C.T.E. Regional Office, Bangalore".

By Order and in the name of the Governor of Karnataka,

**K. S. VENUGOPAL**

PR-1405 Under Secretary to Government, Education Department.

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ :** ಉತ್ತರಕನ್ನಡ ಜಿಲ್ಲೆಯಲ್ಲಿ 1.7.1984ರ ಮುಂಚೆ ನೇಮಕಗೊಂಡ ಅರಣ್ಯ ಇಲಾಖೆಯ ದಿನಗೂಲಿ ನೌಕರರ ಸೇವೆಯನ್ನು ಸಕ್ರಮಗೊಳಿಸುವ ಬಗ್ಗೆ.

**ಓದಲಾಗಿದೆ :**
1) ಸರ್ಕಾರದ ಆದೇಶ ಸಂಖ್ಯೆ: ಡಿಪಿಎಆರ್ 2 ಎಸ್‌ಎಲ್‌ಸಿ 95, ದಿನಾಂಕ: 23.11.95
2) ಸರ್ಕಾರದ ಆದೇಶ ಸಂಖ್ಯೆ: ಡಿಪಿಎಆರ್ 2 ಎಸ್‌ಎಲ್‌ಸಿ 97, ದಿನಾಂಕ: 11.4.97.
3) ಜಿಲ್ಲಾಧಿಕಾರಿಗಳು, ಉತ್ತರ ಕನ್ನಡ ಜಿಲ್ಲೆ ಕಾರವಾರ ಇವರ ಪತ್ರ ಸಂಖ್ಯೆ: ಕಂಶಾ/ಸಿಬ್ಬಂದಿ (2) ವಿವ-22/ 2000-01, ದಿನಾಂಕ: 20.02.2001 ಮತ್ತು 14.5.2001.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರಲ್ಲಿನ ಸರ್ಕಾರದ ಆದೇಶದಲ್ಲಿ ದಿನಾಂಕ: 1.7.1984 ರಂದು ಮತ್ತು ಅದಕ್ಕೆ ಮುಂಚೆ ನೇಮಕಾತಿಗೊಂಡ ದಿನಗೂಲಿ ನೌಕರರ ಸೇವೆಗಳನ್ನು ಸಕ್ರಮಗೊಳಿಸುವ ಬಗ್ಗೆ ಕ್ರಮ ಕೈಗೊಳ್ಳಲು ಅನುಸರಿಸಬೇಕಾದ ವಿಧಿವಿಧಾನಗಳನ್ನು ನಿಗದಿಪಡಿಸಲಾಗಿತ್ತು, ಭಾರತದ ಸರ್ವೋಚ್ಚ ನ್ಯಾಯಾಲಯವು ರಿಟ್ ಅರ್ಜಿ ಸಂಖ್ಯೆ: 8307-11/93 ಧಾರವಾಡ ಜಿಲ್ಲೆ, ಲೋಕೋಪಯೋಗಿ ಇಲಾಖೆಯ ಲಿಟ್ರೇಟ್ ದಿನಗೂಲಿ ನೌಕರರ ಸಂಘ ಮತ್ತು ಇತರರು ವಿರುದ್ಧ ರಾಜ್ಯ ಸರ್ಕಾರ, ದಿನಾಂಕ: 23.2.90ರ ತೀರ್ಪಿನಲ್ಲಿ ಅರ್ಹರಿರುವ ಎಲ್ಲಾ ದಿನಗೂಲಿ ನೌಕರರನ್ನು ಸಕ್ರಮಗೊಳಿಸಲು ದಿನಾಂಕ: 31.12.97ರವರೆಗೆ ಕಾಲಮಿತಿಯನ್ನು ವಿಧಿಸಿರುವ ಹಿನ್ನೆಲೆಯಲ್ಲಿ ಮೇಲೆ ಓದಲಾದ ಆದೇಶದಲ್ಲಿ ನೌಕರರನ್ನು ಸಕ್ರಮಗೊಳಿಸಲು ಅನುಸರಿಸಬೇಕಾದ ವಿಧಿವಿಧಾನಗಳನ್ನು ಪರಿಷ್ಕರಿಸಿ ಆದೇಶ ಹೊರಡಿಸಿದೆ. ಮೇಲೆ ಓದಲಾದ ಕ್ರಮ ಸಂಖ್ಯೆ (3) ರಲ್ಲಿ ಜಿಲ್ಲಾಧಿಕಾರಿಗಳು, ಉತ್ತರ ಕನ್ನಡ ಜಿಲ್ಲೆ, ಕಾರವಾರರವರು ದಿನಾಂಕ: 1.7.84ರ ಮೊದಲು ನೇಮಕಗೊಂಡ ದಿನಗೂಲಿ ಆಧಾರದ ಮೇಲೆ ಸೇವೆ ಸಲ್ಲಿಸುವವರನ್ನು ಸಕ್ರಮಗೊಳಿಸಲು ಕ್ರಮವಾಗಿ 17 ಮತ್ತು 20 ನೌಕರರ ವಿವರಗಳನ್ನು ಸಲ್ಲಿಸಿ, ಅದರಲ್ಲಿ ಒಂದು "ಸಿ" ಗ್ರೂಪ್ ಹಾಗೂ 36 "ಡಿ" ಗ್ರೂಪ್ ಹುದ್ದೆಗಳಿಗೆ ಸೂಪರ್‌ನ್ಯೂಮರರಿ ಹುದ್ದೆಗಳನ್ನು ಸೃಜಿಸಲು ಕೋರಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

### ಸರ್ಕಾರಿ ಆದೇಶ ಸಂಖ್ಯೆ: ಅಪಜೀ 75 ಅಅಸೇ 2000, ಬೆಂಗಳೂರು, ದಿನಾಂಕ: 6ನೇ ಅಕ್ಟೋಬರ್ 2003

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಅರಣ್ಯ ಇಲಾಖೆಯ ಉತ್ತರ ಕನ್ನಡ ಜಿಲ್ಲೆಯಲ್ಲಿ ದಿನಾಂಕ: 1.7.84 ಮತ್ತು ಅದರ ಪೂರ್ವದಲ್ಲಿ ನೇಮಕಗೊಂಡು ಸರ್ಕಾರದ ಆದೇಶ ಸಂಖ್ಯೆ: ಡಿಪಿಎಆರ್ 2 ಎಸ್‌ಎಲ್‌ಸಿ 90, ದಿನಾಂಕ: 6.8.90 ಮತ್ತು ನಂತರ ಹೊರಡಿಸಿರುವ ಸ್ಪಷ್ಟೀಕರಣ ಪ್ರಕಾರ ಅರ್ಹರಿರುವ ನೌಕರರನ್ನು ಸಕ್ರಮಗೊಳಿಸಲು ಸರ್ಕಾರ ಒಂದು "ಸಿ" ಗ್ರೂಪ್ ಹಾಗೂ 36 "ಡಿ" ಗ್ರೂಪ್ ಒಟ್ಟು 37 ಸೂಪರ್‌ನ್ಯೂಮರರಿ ಹುದ್ದೆಗಳನ್ನು ಸೃಜಿಸಿದೆ. ಸಕ್ರಮಗೊಳಿಸಬೇಕಾದ ನೌಕರರ ಪಟ್ಟಿಯನ್ನು ಅನುಬಂಧದಲ್ಲಿ ನಮೂದಿಸಿ ಲಗತ್ತಿಸಲಾಗಿದೆ. ಈ ಸೂಪರ್ ನ್ಯೂಮರರಿ ಹುದ್ದೆಗಳ ಸೃಜನೆಯನ್ನು ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 2 ಎಸ್‌ಎಲ್‌ಸಿ 95, ದಿನಾಂಕ: 23.11.95 ಆದೇಶದಲ್ಲಿನ ಕಂಡಿಕೆ 4-3 (II) (III) (V) (VI) ಮತ್ತು (VII)ರಲ್ಲಿ ನಿಗದಿಪಡಿಸಿದ ನಿಬಂಧನೆಗೆ ಒಳಪಟ್ಟು ಹೊರಡಿಸಿದೆ. ಈ ಸೂಪರ್‌ನ್ಯೂಮರರಿ ಹುದ್ದೆಗಳು ಯಾವ ಸರ್ಕಾರಿ ನೌಕರರಿಗೆ ಸೃಜಿಸಲಾಗಿದೆ ಆ ನೌಕರರ ನಿವೃತ್ತಿಯಿಂದಾಗಲೀ ಅಥವಾ ಶಾಶ್ವತ ಹುದ್ದೆ ಪಡೆದು ಅಥವಾ ಬೇರೆ ಕಾರಣಗಳ ಮೂಲಕ ತ್ಯಜಿಸಿದಲ್ಲಿ ರದ್ದಾಗುತ್ತದೆ.

18 ವರ್ಷ ವಯೋಮಿತಿಗೆ ಮೊದಲು ನೇಮಕಾತಿ ಮಾಡಿಕೊಳ್ಳಲಾದ ಅನುಬಂಧದಲ್ಲಿ ತೋರಿಸಿದ ಕ್ರಮಸಂಖ್ಯೆ 1, 9, 10, 18, 22, 29, 31 ಮತ್ತು 34 ರಲ್ಲಿರುವ ದಿನಗೂಲಿ ನೌಕರರ ಬಗ್ಗೆ ಸರ್ಕಾರಿ ಆದೇಶ ದಿನಾಂಕ: 6.3.90ಕ್ಕೆ ಒಳಪಟ್ಟು ಅವರು 18 ವರ್ಷ ವಯೋಮಿತಿಯನ್ನು ಪೂರ್ಣಗೊಳಿಸಿದ ದಿನಾಂಕದಿಂದ 10 ವರ್ಷಗಳು ಪೂರೈಸಿದ ನಂತರ ಸಕ್ರಮಗೊಳಿಸಲು ಸೂಚಿಸಲಾಗಿದೆ.

ಈ ಆದೇಶವನ್ನು ಸಿ.ಆ.ಸು. ಇಲಾಖೆಯ ಆದೇಶ ಸಂಖ್ಯೆ: ಡಿಪಿಎಆರ್ 2 ಎಸ್‌ಎಲ್‌ಸಿ 97, ದಿನಾಂಕ: 11.4.97ರಲ್ಲಿ ನೀಡಲಾಗಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ನಾರಾಯಣಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

### ಸರ್ಕಾರದ ಆದೇಶ ಸಂಖ್ಯೆ: ಅಪಜೀ 75 ಅಅಸೇ 2000, ಬೆಂಗಳೂರು, ದಿನಾಂಕ: 6.10.2003ರ ಅನುಬಂಧ

| ಕ್ರ. ಸಂ. | ದಿನಗೂಲಿ: ಮಾಸಿಕ ದರದ ನೌಕರರ ಹೆಸರು ಶ್ರೀ/ಶ್ರೀಮತಿ | ಪ್ರಸ್ತುತ ಕಾರ್ಯ ನಿರ್ವಹಿಸುತ್ತಿರುವ ವಲಯದ ಹೆಸರು | ಪ್ರಸ್ತುತ ಕಾರ್ಯನಿರ್ವ ಹಿಸುತ್ತಿರುವ ಹುದ್ದೆ ಪದನಾಮ | ಜನ್ಮ ದಿನಾಂಕ | ನೇಮಕಾತಿ ಹೊಂದಿದ ದಿನಾಂಕ | ಧಾರಣ ಮಾಡಿದ ಹುದ್ದೆಗೆ ನಿಗದಿಪಡಿಸಿದ ವಿದ್ಯಾರ್ಹತೆ ಅಥವಾ ಅವರು ಹೊಂದಿರುವ ವಿದ್ಯಾರ್ಹತೆ | 10 ವರ್ಷ ಸೇವೆ ಪೂರ್ಣಗೊಳಿಸಿದ ದಿನಾಂಕ | 10 ವರ್ಷಗಳ ಸೇವೆಯ ಅವಧಿಯಲ್ಲಿ ಕೆಲಸ ಮಾಡಿರುವ ಒಟ್ಟು ದಿನಗಳು. |
|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 |

| 1 | 2 | 3 | 4 | 5 | 6 | 7 | 8 | 9 |
|---|---|---|---|---|---|---|---|---|
| 1 | ಲಕ್ಷ್ಮಣಗಿರಿಯಗೌಡ | ವಲಯ ಅರಣ್ಯಾಧಿಕಾರಿ, ಕುಮಟಾ | ವಾಚ್‌ಮನ್ | 1.6.67 | 1.6.84 | 1ನೇ ತರಗತಿ | 31.5.94 | |
| 2 | ಹನುಮಂತರಾಮ ನಾಯ್ಕ | ವಲಯ ಅರಣ್ಯಾಧಿಕಾರಿ, ಕುಮಟಾ | ವಾಚ್‌ಮನ್ | 1.6.63 | 1.6.84 | 4ನೇ ತರಗತಿ | 31.5.94 | |
| 3 | ಸುಲೇಮಾನ್ ಖಾನ್ ಇಬ್ರಾಹಿಂಖಾನ್ | ವಲಯ ಅರಣ್ಯಾಧಿಕಾರಿ, ಕುಮಟಾ | ವಾಚ್‌ಮನ್ | 31.5.53 | 21.6.84 | ಎಸ್‌ಎಸ್ ಎಲ್‌ಸಿ | 20.6.94 | |
| 4 | ಎ.ಎಸ್. ನಾಯಕ್ | ಹಿರೇಗುತ್ತಿ | ಕಾವಲುಗಾರ | 1.11.64 | 1.6.84 | 7ನೇ ತರಗತಿ | 1.6.94 | |
| 5 | ವಾಸು ಸಣ್ಣನಾಯಕ್ | ಹಿರೇಗುತ್ತಿ | ಕಾವಲುಗಾರ | 15.7.56 | 1.6.84 | 5ನೇ ತರಗತಿ | 1.6.94 | |
| 6 | ಮಾದೇವರಾಮ ನಾಯ್ಕ | ಮಂಕಿ | ಅರಣ್ಯ ವೀಕ್ಷಕ | 1.4.48 | 1.4.83 | 2ನೇ ತರಗತಿ | 1.4.93 | |
| 7 | ಈರಾ ನಾರಾಯಣ ಹಳ್ಳೇರ | ಮಂಕಿ | ಅರಣ್ಯ ವೀಕ್ಷಕ | 10.4.65 | 1.7.83 | 4ನೇ ತರಗತಿ | 1.7.93 | |
| 8 | ಕೃಷ್ಣಮಾಸ್ತಿ ಮುಕ್ರಿ | ಕತಗಾಲ | ಕಾವಲುಗಾರ | 1.6.65 | 1.4.84 | 7ನೇ ತರಗತಿ | 1.4.94 | |
| 9 | ಸುಗ್ಗಿ ಹೊಸಬುಗೌಡ | ಕತಗಾಲ | ಕಾವಲುಗಾರ | 23.7.68 | 1.4.84 | 7ನೇ ತರಗತಿ | 1.4.94 | |
| 10 | ಸದಾನಂದ ಜಟ್ಟಪ್ಪ ಪಟಗಾರ | ಕತಗಾಲ | ಕಾವಲುಗಾರ | 1.6.68 | 1.7.84 | 7ನೇ ತರಗತಿ | 1.7.94 | |
| 11 | ಕಮಲಾಕರ ಐ. ನಾಯಕ | ಗೇರುಸೊಪ್ಪಾ | ನಿಸ್ತಂತು ನಿರ್ವಾಹಕ | 1.6.65 | 1.2.84 | ಎಸ್‌ಎಸ್ ಎಲ್‌ಸಿ | 1.2.94 | |
| 12 | ಕ್ಷೇತ್ರ ಎನ್. ಗೌಡ | ಗೇರುಸೊಪ್ಪಾ | ಕಾವಲುಗಾರ | 10.9.52 | 15.4.83 | 4ನೇ ತರಗತಿ | 15.4.93 | |
| 13 | ಮಂಜುನಾಥ ಸೀತಾರಾಮ ನಾಯ್ಕ | ಹೊನ್ನಾವರ | ಕ್ಲೀನರ್ | 25.7.62 | 1.7.84 | 1ನೇ ತರಗತಿ | 30.6.94 | |
| 14 | ತಿಮ್ಮಪ್ಪ ಮಾಬ್ಲನಾಯ್ಕ | ಹೊನ್ನಾವರ | ವಾಚ್‌ಮನ್ | 15.6.50 | 1.1.84 | 3ನೇ ತರಗತಿ | 31.12.93 | |
| 15 | ನರಸಿಂಹ ಮಂಜು ಮಡಿವಾಳ | ಹೊನ್ನಾವರ | ವಾಚ್‌ಮನ್ | 1.10.64 | …6.84 | 6ನೇ ತರಗತಿ | 31.5.94 | |
| 16 | ಮಾಸ್ತಿ ಮಂಗಳಗೊಂದ | ಭಟ್ಕಳ | ವಾಚ್‌ಮನ್ | 1.6.60 | 1.4.84 | 3ನೇ ತರಗತಿ | 31.3.94 | |
| 17 | ರಿಯಾಜಿ ಎಂ. ಕಟ್ಟಿ | ಮುಂಡಗೋಡ | ಕಾವಲುಗಾರ | 31.5.62 | ….1.80 | 4ನೇ ತರಗತಿ | ….1.90 | |
| 18 | ನವಲು ನಾನಾ ಪಾಟೀಲ | ಬರ್ಚಿ | ಡಿ ಗ್ರೂಪ್ | | 1.6.82 | 8ನೇ ತರಗತಿ | 1.6.92 | |
| 19 | ಬಾಬೂ ಜಾನು ಪಾಟೀಲ | ಬರ್ಚಿ | ಡಿ ಗ್ರೂಪ್ | 1.10.65 | 1.10.82 | - | 1.6.92 | |
| 20 | ವಿಠಲ ಷಟು ಶಿಂದೆ | ಬರ್ಚಿ | ಡಿ ಗ್ರೂಪ್ | 15.8.65 | 1.4.83 | - | 1.4.93 | |
| 21 | ಬಮ್ಮು ಮರ್ರ್ಯು ಗಾಳಿ | ಬರ್ಚಿ | ಡಿ ಗ್ರೂಪ್ | 1.6.57 | 1.4.83 | 3ನೇ ತರಗತಿ | 1.4.93 | |
| 22 | ಧೂಳು ಪಾರು ಷಾರೆ | ಬರ್ಚಿ | ಡಿ ಗ್ರೂಪ್ | 6.10.67 | 1.4.83 | - | 1.4.93 | |
| 23 | ಬೈರುಜಾನು ಷಾರೆ | ಬರ್ಚಿ | ಡಿ ಗ್ರೂಪ್ | 1.6.58 | 1.4.83 | - | 1.4.93 | |
| 24 | ಅಶೋಕ ರಾಮಾ ಅಳವಾಡಕರ | ಬರ್ಚಿ | ಡಿ ಗ್ರೂಪ್ | 22.7.62 | 1.4.83 | 1ನೇ ತರಗತಿ | 1.4.93 | |
| 25 | ತಮ್ಮಣ್ಣ ಬಾಳಪ್ಪಾ ನಾಯ್ಕ | ಬರ್ಚಿ | ಡಿ ಗ್ರೂಪ್ | 10.7.64 | 1.4.83 | - | 1.4.93 | |
| 26 | ಪುಂಡಲೀಕ ದೇ. ಪಾಟೀಲ | ಬರ್ಚಿ | ಡಿ ಗ್ರೂಪ್ | 15.4.47 | 1.4.84 | 4ನೇ ತರಗತಿ | 1.4.94 | |
| 27 | ಕೃಷ್ಣಾ ಗೊಗೋ ದೇಸಾಯಿ | ವಿರ್ನೋಲಿ | ಡಿ ಗ್ರೂಪ್ | 1.3.54 | 1.5.81 | 4ನೇ ತರಗತಿ | 1.5.91 | |
| 28 | ಸಂಗಪ್ಪ ಗಂಗಪ್ಪ ಅಟ್ಟಗೈ | ದಾಂಡೇಲಿ | ಡಿ ಗ್ರೂಪ್ | 1.1.44 | 1.5.84 | ಅನಕ್ಷರಸ್ಥ | 30.4.94 | |
| 29 | ಡುಮಿಂಗ್ ಬಸ್ತಾಂವ ಡಾಯಸ್ | ಗುಂದ | ಡಿ ಗ್ರೂಪ್ | 15.6.67 | ಜೂನ್ 84 | 7ನೇ ತರಗತಿ | ಜೂನ್ 94 | |
| 30 | ಮನವೆಲ್ ಕ್ರಿಸ್ತೊಫೇರ್ ರೊಡ್ರಿಕ್ಸ್ | ಗುಂದ | ಡಿ ಗ್ರೂಪ್ | 13.5.65 | ಮೇ 94 | 6ನೇ ತರಗತಿ | ಮೇ 95 | |

| 1 | 2 | 3 | 4 | 5 | 6 | 7 | 8 | 9 |
|---|---|---|---|---|---|---|---|---|
| 31 | ಬಾವತೀಸ್ ಕ್ರಿಸ್ಟೋಫೇರ್ ರೊಡ್ರಿಕ್ಸ್ | ಗುಂದ | ಡಿ ಗ್ರೂಪ್ | 12.10.68 | ಮೇ 84 | 6ನೇ ತರಗತಿ | ಮೇ 95 | |
| 32 | ಬೇಜಮಿ ಫರಶಿಕ ಫರ್ನಾಂಡೀಸ್ | ಗುಂದ | ಡಿ ಗ್ರೂಪ್ | 4.9.62 | ಮೇ 84 | 6ನೇ ತರಗತಿ | ಮೇ 95 | |
| 33 | ರಮೇಶ ನಾರಾಯಣ ಧರಣಿ | ವಿರ್ನೋಲಿ | ಡಿ ಗ್ರೂಪ್ | 25.5.66 | 1.7.83 | 5ನೇ ತರಗತಿ | 1.7.93 | |
| 34 | ಅಬ್ದುಲ್ ರಯಫ್ ಉಸ್ಮಾನಸಾಬ್ | ಗಣೇಶಗುಡಿ | ಡಿ ಗ್ರೂಪ್ | 20.2.70 | ಜೂನ್ 84 | 4ನೇ ತರಗತಿ | ಜೂನ್ 95 | |
| 35 | ಗುಂಡು ತಾಯಿ ತುಳಸಿದೇವಸ್ಥಾನ | ಗುಂದ | ಡಿ ಗ್ರೂಪ್ | 26.9.45 | ಮಾರ್ಚ್ 84 | - | ಮಾರ್ಚ್ 94 | |
| 36 | ಜೆಜ್ಮಿ ಪರಾಶಿವ ಫರ್ನಾಂಡೀಸ್ | ಗುಂದ | ಡಿ ಗ್ರೂಪ್ | 4.9.62 | ಮೇ 84 | 5ನೇ ತರಗತಿ | ಮೇ 94 | |
| 37 | ವಿಕ್ಟರ್ ಆಯ್ ಡಯಾಸ್ | ದಾಂಡೇಲಿ | ಸಿ ಗ್ರೂಪ್ | 5.10.64 | 1.7.81 | ಎಸ್‌ಎಸ್ ಎಲ್‌ಸಿ | 30.6.91 | |

**ಎಸ್. ನಾರಾಯಣಸ್ವಾಮಿ**
ಪಿ.ಆರ್. 1406
ಸರ್ಕಾರದ ಅಧೀನ ಕಾರ್ಯದರ್ಶಿ,
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

## ಕಂದಾಯ ಸಚಿವಾಲಯ

**ವಿಷಯ :** ಶ್ರೀ ಬಿ. ಆರ್. ಕೃಷ್ಣನ್, ಹಿಂದಿನ ತಹಶೀಲ್ದಾರ್ ಚಿಂತಾಮಣಿ ತಾಲ್ಲೂಕು ಕೋಲಾರ ಜಿಲ್ಲೆ ಹಾಲಿ ಕೆ.ಎ.ಎಸ್. (ಕಿರಿಯ ಶ್ರೇಣಿ) ಅಧಿಕಾರಿ, ಶ್ರೀ ಸಿ. ಎಸ್. ರಾಮ ಐಯಂಗಾರ್, ಹಿಂದಿನ ಶಿರಸ್ತೇದಾರ್, ಶ್ರೀ ಡಿ. ಶಿವಶಂಕರಪ್ಪ ಹಿಂದಿನ ರಾಜಸ್ವ ನಿರೀಕ್ಷಕ ಮತ್ತು ಶ್ರೀ ಬಿ. ಎಸ್. ಶೇಷಗಿರಿರಾವ್ ಗ್ರಾಮ ಲೆಕ್ಕಿಗ, ಈ ಮೂವರು ತಾಲ್ಲೂಕು ಕಛೇರಿ ಚಿಂತಾಮಣಿ ಇವರುಗಳನ್ನು ಇವರುಗಳ ವಿರುದ್ಧದ ಆರೋಪಗಳಿಂದ ಮುಕ್ತಗೊಳಿಸುವ ಬಗ್ಗೆ.

**ಓದಲಾಗಿದೆ :**
1) ದಿನಾಂಕ: 22.3.93ರ ಸರ್ಕಾರಿ ಆದೇಶ ಸಂಖ್ಯೆ: ಆರ್‌ಡಿ 42 ಎಡಿಇ 92
2) ಹೆಚ್ಚುವರಿ ನಿಬಂಧಕರು, ವಿಚಾರಣೆಗಳು-3, ಕರ್ನಾಟಕ ಲೋಕಾಯುಕ್ತ ಕಛೇರಿ, ಬೆಂಗಳೂರು ಇವರ ದಿನಾಂಕ: 29.4.03ರ ವಿಚಾರಣಾ ವರದಿ ಸಂಖ್ಯೆ: ಲೋಕ್: ಎಆರ್‌ಇ-3: ಇಎನ್‌ಕ್ಯೂ-7: 97-98.
3) ಗೌರವಾನ್ವಿತ ಕರ್ನಾಟಕ ಲೋಕಾಯುಕ್ತರು, ಬೆಂಗಳೂರು ಇವರ ದಿನಾಂಕ: 29.5.03ರ ಪತ್ರ ಸಂಖ್ಯೆ: ಲೋಕ್: ಎಆರ್‌ಇ-3: ಇಎನ್‌ಕ್ಯೂ-7: 97-98.

**ಪ್ರಸ್ತಾವನೆ:**

ಚಿಂತಾಮಣಿ ತಾಲ್ಲೂಕು ಮುಂಗಾನಹಳ್ಳಿ ಹೋಬಳಿ ರಾಜಸ್ವ ನಿರೀಕ್ಷಕರಾಗಿ ಸೇವೆ ಸಲ್ಲಿಸುತ್ತಿದ್ದ ಶ್ರೀ ಡಿ. ಶಿವಶಂಕರಪ್ಪ ಎಂಬುವವರು ಫಿರ್ಯಾದುದಾರರಾದ ಶ್ರೀ ಆರ್. ವಿ. ಶ್ರೀರಾಮರೆಡ್ಡಿ, ಎಂಬುವವರಿಂದ ಅಕ್ರಮ ಸಂಭಾವನೆಯನ್ನು ಕೇಳಿ ಪಡೆಯುತ್ತಿದ್ದಾಗ ದಿನಾಂಕ: 30.1.91 ರಂದು ಲೋಕಾಯುಕ್ತ ಪೋಲೀಸರ ಬಲೆಗೆ ಸಿಕ್ಕಿಬಿದ್ದು ಸದರಿ ಪ್ರಕರಣದಲ್ಲಿ ಅವರೊಂದಿಗೆ ಚಿಂತಾಮಣಿ ತಾಲ್ಲೂಕಿನ ಹಿಂದಿನ ತಹಶೀಲ್ದಾರ್‌ರಾಗಿದ್ದ ಶ್ರೀ ಬಿ. ಆರ್. ಕೃಷ್ಣನ್, ಶ್ರೀ ರಾಮ ಐಯಂಗಾರ್, ಹಿಂದಿನ ದಾಖಲೆ ಶಿರಸ್ತೇದಾರ್ ಮತ್ತು ಶ್ರೀ ಶೇಷಗಿರಿರಾವ್, ಹಿಂದಿನ ಗ್ರಾಮ ಲೆಕ್ಕಿಗ, ರಾಘುಟ್ಟಹಳ್ಳಿ, ತಾಲ್ಲೂಕು ಕಛೇರಿ, ಚಿಂತಾಮಣಿ ಇವರುಗಳು ಒಂದಲ್ಲಾವೊಂದು ರೀತಿಯಲ್ಲಿ ಸದರಿ ಪ್ರಕರಣದಲ್ಲಿ ಭಾಗಿಗಳಾಗಿರುವರೆಂದು ಅವರುಗಳೆಲ್ಲರ ವಿರುದ್ಧ ಜಂಟಿ ಇಲಾಖಾ ವಿಚಾರಣೆ ಜರುಗಿಸಲು ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಗೌರವಾನ್ವಿತ ಉಪ ಲೋಕಾಯುಕ್ತರಿಗೆ ವಹಿಸಲಾಗಿತ್ತು. ಅದರಂತೆ ಹೆಚ್ಚುವರಿ ನಿಬಂಧಕರು, ವಿಚಾರಣೆಗಳು-3, ಕರ್ನಾಟಕ ಲೋಕಾಯುಕ್ತ ಕಛೇರಿ, ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ತಮ್ಮ ವಿಚಾರಣಾ ವರದಿಯಲ್ಲಿ ಆರೋಪಿತರ ವಿರುದ್ಧದ ಆರೋಪಗಳನ್ನು ಸಾಬೀತುಪಡಿಸುವಲ್ಲಿ ಶಿಸ್ತು ಪ್ರಾಧಿಕಾರವು ವಿಫಲವಾಗಿರುವುದರಿಂದ ಸದರಿ ಆರೋಪಗಳು ಸಾಬೀತಾಗಿರುವುದಿಲ್ಲವೆಂದು ಅಭಿಪ್ರಾಯಪಟ್ಟಿರುತ್ತಾರೆ. ಸದರಿ ವಿಚಾರಣಾ ವರದಿಯನ್ನು ಸರ್ಕಾರವು ಒಪ್ಪುವುದಾದಲ್ಲಿ, ಈ ಪ್ರಕರಣದಲ್ಲಿನ ಎಲ್ಲಾ ಆರೋಪಿತರನ್ನು ಅವರುಗಳ ವಿರುದ್ಧದ ಆರೋಪಗಳಿಂದ ಮುಕ್ತರನ್ನಾಗಿಸಿ ಆದೇಶಿಸುವಂತೆ ಹಾಗೂ ಅಂತಹ ಕ್ರಮವನ್ನು ಕೈಗೊಂಡ ಬಗ್ಗೆ ಮಾಹಿತಿ ನೀಡುವಂತೆ ಗೌರವಾನ್ವಿತ ಲೋಕಾಯುಕ್ತರು ಮೇಲೆ ಕ್ರಮ ಸಂಖ್ಯೆ (3) ರಲ್ಲಿ ಓದಲಾದ ಪತ್ರದಲ್ಲಿ ಅಪೇಕ್ಷಿಸಿರುತ್ತಾರೆ.

ವಿಚಾರಣಾಧಿಕಾರಿಗಳ ವಿಚಾರಣಾ ವರದಿ ಹಾಗೂ ಅದಕ್ಕೆ ಸಂಬಂಧಪಟ್ಟ ದಾಖಲಾತಿಗಳನ್ನು ಪರಿಶೀಲಿಸಿ ಸರ್ಕಾರವು ವಿಚಾರಣಾಧಿಕಾರಿಗಳ ವರದಿಯನ್ನು ಒಪ್ಪಿಕೊಂಡು ಶ್ರೀಯುತರಾದ ಬಿ. ಆರ್. ಕೃಷ್ಣನ್, ಸಿ. ಎಸ್. ರಾಮ ಐಯ್ಯಂಗಾರ್, ಡಿ. ಶಿವಶಂಕರಪ್ಪ, ಬಿ. ಎಸ್. ಶೇಷಗಿರಿರಾವ್ ಇವರುಗಳ ವಿರುದ್ಧದ ಆರೋಪಗಳು ಸಾಬೀತಾಗದಿರುವುದು ಸ್ಪಷ್ಟವಾಗಿರುವುದರಿಂದ ಅವರುಗಳನ್ನು ಆರೋಪ ಮುಕ್ತರನ್ನಾಗಿಸಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 42 ಎಡಿಇ 92, ಬೆಂಗಳೂರು, ದಿನಾಂಕ: 30ನೇ ಅಕ್ಟೋಬರ್ 2003**

ಪ್ರಸ್ತಾವನೆಯಲ್ಲಿ ಕೂಲಂಕಷವಾಗಿ ಪರಿಶೀಲಿಸಿರುವ ಹಿನ್ನೆಲೆಯಲ್ಲಿ ಶ್ರೀ ಬಿ. ಆರ್. ಕೃಷ್ಣನ್, ಹಿಂದಿನ ತಹಶೀಲ್ದಾರ್, ಚಿಂತಾಮಣಿ ತಾಲ್ಲೂಕು ಹಾಲಿ ಕೆ. ಎ. ಎಸ್. (ಕಿರಿಯ ಶ್ರೇಣಿ) ಅಧಿಕಾರಿ, ಶ್ರೀ ಸಿ. ಎಸ್. ರಾಮ ಐಯ್ಯಂಗಾರ್, ಹಿಂದಿನ ಶಿರಸ್ತೇದಾರ್, ಶ್ರೀ ಡಿ. ಶಿವಶಂಕರಪ್ಪ, ಹಿಂದಿನ ರಾಜಸ್ವ ನಿರೀಕ್ಷಕ, ಮತ್ತು ಶ್ರೀ ಬಿ. ಎಸ್. ಶೇಷಗಿರಿರಾವ್, ಹಿಂದಿನ ಗ್ರಾಮ ಲೆಕ್ಕಿಗ, ತಾಲ್ಲೂಕು ಕಛೇರಿ, ಚಿಂತಾಮಣಿ ತಾಲ್ಲೂಕು ಇವರುಗಳನ್ನು ಅವರ ವಿರುದ್ಧ ದಿನಾಂಕ: 22.3.93ರ ಸರ್ಕಾರಿ ಆದೇಶ ಸಂಖ್ಯೆ: ಆರ್‌ಡಿ 42 ಎಡಿಇ 92ರಲ್ಲಿ ಹೊರಿಸಲಾದ ಆರೋಪಗಳಿಂದ ಮುಕ್ತಗೊಳಿಸಿದೆ.

ಈ ಪ್ರಕರಣದ ಮಟ್ಟಿಗೆ ಸಂಬಂಧಿಸಿದಂತೆ ಇವರುಗಳ ವಿರುದ್ಧ ಈ ವಿಚಾರಣೆಯು ನಡೆಯದಿದ್ದಲ್ಲಿ ಅವರುಗಳು ಯಾವ ಸೇವಾ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಿದ್ದರೋ ಅಂತಹ ಸೇವಾ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1407 **ಎಂ. ಎಸ್. ಮಹಂತೇಶಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ(ಸೇವೆಗಳು-3).

**ತಿದ್ದೋಲೆ ಸಂಖ್ಯೆ: ಆರ್‌ಡಿ 40 ಎಡಿಇ 2000 ಬೆಂಗಳೂರು, ದಿನಾಂಕ: 31ನೇ ಅಕ್ಟೋಬರ್ 2003**

**ವಿಷಯ :** ಶ್ರೀ ಟಿ. ಎಸ್. ಪಾರ್ಥಸಾರಥಿ, ಹಿಂದಿನ ತಹಶೀಲ್ದಾರ್ ಶ್ರೀರಂಗಪಟ್ಟಣ ತಾಲ್ಲೂಕು, ಹಾಲಿ ನಿವೃತ್ತರು ಶ್ರೀ ಎಸ್. ಕೆ. ಕರಿಯಪ್ಪ, ಪ್ರ.ದ.ಸ., ಮತ್ತು ಶ್ರೀ ಮರಿಸ್ವಾಮಿ, ಗ್ರಾಮ ಲೆಕ್ಕಿಗ, ತಾಲ್ಲೂಕು ಕಛೇರಿ, ಶ್ರೀರಂಗಪಟ್ಟಣ ತಾಲ್ಲೂಕು ಇವರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆ-ಇವರುಗಳನ್ನು ಆರೋಪ ಮುಕ್ತರನ್ನಾಗಿಸುವ ಬಗ್ಗೆ.

**ಉಲ್ಲೇಖ :** ದಿನಾಂಕ: 6.10.2003ರ ಸರ್ಕಾರಿ ಆದೇಶ ಸಂಖ್ಯೆ: ಆರ್‌ಡಿ 40 ಎಡಿಇ 2000.

ದಿನಾಂಕ: 6.10.2003ರ ಉಲ್ಲೇಖಿತ ಸರ್ಕಾರಿ ಆದೇಶದಲ್ಲಿನ ಆದೇಶ ಭಾಗದ ಕೊನೇ ಕಂಡಿಕೆಯ ಎರಡನೇ ಸಾಲಿನಲ್ಲಿ ನಮೂದಾದ "ದಿನಾಂಕ: 9.7.2000" ಎನ್ನುವುದನ್ನು ತಿದ್ದಿ "4.7.2000" ಎಂದು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1408 **ಎಂ. ಎಸ್. ಮಹಂತೇಶಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ(ಸೇವೆಗಳು-3).

**ವಿಷಯ :** 2003-04ನೇ ಸಾಲಿನಲ್ಲಿ ರಾಜ್ಯದಲ್ಲಿನ ಕೆಲವೊಂದು ತಾಲ್ಲೂಕುಗಳನ್ನು ಬರಪೀಡಿತ ಪ್ರದೇಶ ವೆಂದು ಘೋಷಿಸುವ ಬಗ್ಗೆ.

**ಓದಲಾಗಿದೆ :**
1) ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 69 ಟಿಎಸ್‌ವೈ 03 ದಿನಾಂಕ: 28.7.2003.
2) ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 69 ಟಿಎಸ್‌ವೈ 03 ದಿನಾಂಕ: 12.9.2003.
3) ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 69 ಟಿಎಸ್‌ವೈ 03 ದಿನಾಂಕ: 1.10.2003.

**ಪ್ರಸ್ತಾವನೆ:**

ಮೇಲೆ (1) (2) ಮತ್ತು (3) ರಲ್ಲಿ ಓದಲಾದ ಆದೇಶದಲ್ಲಿ ರಾಜ್ಯದ 140 ತಾಲ್ಲೂಕುಗಳನ್ನು **ಬರಪೀಡಿತ ಪ್ರದೇಶ** ವೆಂದು ಘೋಷಿಸಲಾಗಿದೆ.

ದಿನಾಂಕ: 1.10.2003 ರಂದು ಅಪರ ಮುಖ್ಯ ಕಾರ್ಯದರ್ಶಿ ಹಾಗೂ ಅಭಿವೃದ್ಧಿ ಆಯುಕ್ತರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ರಾಜ್ಯದಲ್ಲಿನ ಇನ್ನೂ ಕೆಲವು ತಾಲ್ಲೂಕುಗಳಲ್ಲಿ ಮಳೆ ಕೊರತೆ ಇರುವ ಬಗ್ಗೆ ಸಮೀಕ್ಷಿಸಲಾಗಿದ್ದು, ಮಳೆ ಪ್ರಮಾಣ, ಕೃಷಿ ಚಟುವಟಿಕೆ, ಬೆಳೆ ಪರಿಸ್ಥಿತಿ, ಒಣಹವೆ ಪರಿಸ್ಥಿತಿ ಇತ್ಯಾದಿ ಬಗ್ಗೆ ಸಮಗ್ರವಾಗಿ ಪರಿಶೀಲಿಸಿ ಪರಿಹಾರ ಕಾಮಗಾರಿಗಳ ಸೌಲಭ್ಯವನ್ನು ವಿಸ್ತರಿಸುವ ಅಗತ್ಯತೆಯನ್ನು ಮನಗಂಡು ಇನ್ನೂ ಕೆಲವು ತಾಲ್ಲೂಕುಗಳನ್ನು ಬರಪೀಡಿತ ಪ್ರದೇಶವೆಂದು ಘೋಷಿಸುವ ಅವಶ್ಯಕತೆ ಬಗ್ಗೆ ಪರಿಗಣಿಸಲು ನಿರ್ಣಯಿಸಿರುವ ಮೇರೆಗೆ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆರ್‌ಡಿ 69 ಟಿಎಸ್‌ವೈ 2003, ಬೆಂಗಳೂರು, ದಿನಾಂಕ: 7ನೇ ಅಕ್ಟೋಬರ್ 2003**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಬರಪೀಡಿತ ಪ್ರದೇಶವೆಂದು ಈಗಾಗಲೇ ಘೋಷಿಸಿರುವ 140 ತಾಲ್ಲೂಕುಗಳ ಜೊತೆಗೆ ಈ ಕೆಳಕಂಡ ತಾಲ್ಲೂಕುಗಳನ್ನು ತುರ್ತು ಪರಿಹಾರ ಕಾಮಗಾರಿಗಳನ್ನು ಹಮ್ಮಿಕೊಳ್ಳುವ ಸಲುವಾಗಿ **"ಬರಪೀಡಿತ ಪ್ರದೇಶ"**ಗಳೆಂದು ಘೋಷಿಸಿದೆ.

| ಕ್ರಮ ಸಂಖ್ಯೆ | ಜಿಲ್ಲೆ | ತಾಲ್ಲೂಕು |
|---|---|---|
| 1 | ತುಮಕೂರು | ತುಮಕೂರು |
| 2 | ಮಂಡ್ಯ | ಮದ್ದೂರು |

ಎಲ್ಲಾ ಇಲಾಖೆಗಳು ಬರಪೀಡಿತ ಪ್ರದೇಶವೆಂದು ಘೋಷಿಸಿರುವ ಈ ತಾಲ್ಲೂಕುಗಳಲ್ಲಿ ಗರಿಷ್ಠ ಮಟ್ಟದಲ್ಲಿ ಉದ್ಯೋಗಸೃಜನೆ ಕಾಮಗಾರಿಗಳು, ಕುಡಿಯುವ ನೀರಿನ ವ್ಯವಸ್ಥೆ, ಜಾನುವಾರುಗಳ ಸಂರಕ್ಷಣೆ ಇತ್ಯಾದಿ ಕೆಲಸ ಕಾರ್ಯಗಳನ್ನು ಕೈಗೊಂಡು ರಾಜ್ಯ ಹಾಗೂ ಕೇಂದ್ರ ಸರ್ಕಾರವು ಹಮ್ಮಿಕೊಳ್ಳುವ ಎಲ್ಲಾ ಯೋಜನೆಗಳನ್ನು ಅನುಷ್ಠಾನಗೊಳಿಸುವಲ್ಲಿ ಕ್ರಮ ಕೈಗೊಳ್ಳುವಂತೆ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1409 **ಎಂ. ವಿ. ಜಯಂತಿ**

ಸರ್ಕಾರದ ಹೆಚ್ಚುವರಿ ಕಾರ್ಯದರ್ಶಿ, ಕಂದಾಯ ಇಲಾಖೆ, (ಪರಿಹಾರ).

**ವಿಷಯ :** ಮೇವು ಖರೀದಿಸುವ ಬಗ್ಗೆ ದರ ನಿಗದಿಪಡಿಸುವ ಕುರಿತು.

**ಓದಲಾಗಿದೆ :** 1) ಸರ್ಕಾರಿ ಆದೇಶ ಸಂಖ್ಯೆ: ಆರ್‌ಡಿ 74 ಟಿಎಸ್‌ವೈ 2002 ದಿನಾಂಕ: 16.6.2003 ಮತ್ತು 4.8.2003.

2) ಜಿಲ್ಲಾಧಿಕಾರಿಗಳು, ಶಿವಮೊಗ್ಗ ಜಿಲ್ಲೆ ಇವರ ಅ.ಸ.ಪತ್ರ ಸಂಖ್ಯೆ: ಸಿಎಎಲ್/ಸಿಆರ್.179/02-03 ದಿನಾಂಕ: 15.9.2003.

3) ನಿರ್ದೇಶಕರು, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ: ನಿಪಸಂ/ಮೇವು/ವಿವ-1/ಬರಗಾಲ/ 2002-03/ಭಾಗ 4 ದಿನಾಂಕ: 1.10.2003.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ಆದೇಶಗಳಲ್ಲಿ ರೈತರು ಬೆಳೆದ ಮೇವನ್ನು ಕೊಳ್ಳುವ ಸಂದರ್ಭದಲ್ಲಿ ವಿವಿಧ ಮೇವುಗಳಿಗೆ ದರಗಳನ್ನು ನಿಗದಿಪಡಿಸಲಾಗಿದೆ.

ಮೇಲೆ (2) ಮತ್ತು (3)ರಲ್ಲಿ ಓದಲಾದ ಪತ್ರಗಳಲ್ಲಿ ಕ್ರಮವಾಗಿ ಶಿವಮೊಗ್ಗ ಜಿಲ್ಲಾಧಿಕಾರಿಗಳು ಹಾಗೂ ನಿರ್ದೇಶಕರು, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಬೆಂಗಳೂರು ರವರು ಶಿವಮೊಗ್ಗ ಜಿಲ್ಲೆಯಲ್ಲಿ ಹೆಚ್ಚಾಗಿ ಬೆಳೆದಿರುವ ಮುಸುಕಿನ ಜೋಳದ ಸಪ್ಪೆಯನ್ನು ಜಿಲ್ಲೆಯ ಜಾನುವಾರುಗಳ ಮೇವಿಗಾಗಿ ಉಪಯೋಗಿಸಿ ಹೆಚ್ಚುವರಿ ಮೇವನ್ನು ಇತರೆ ಬೇಡಿಕೆ ಇರುವ ಜಿಲ್ಲೆಗಳಿಗೆ ರೈತರಿಂದ ಖರೀದಿಸಲು ಮುಸುಕಿನ ಜೋಳದ ಸಪ್ಪೆ (ತೆನೆ ಕೊಯಿಲು ಮಾಡಿದ ನಂತರ) ಯನ್ನು ಪ್ರತಿ ಟನ್ನಿಗೆ ರೂ. 750.00 ರಂತೆ ಖರೀದಿಸಲು ಬರಗಾಲದ ಹಿನ್ನೆಲೆಯಲ್ಲಿ ಮತ್ತು ಜಾನುವಾರುಗಳ ಹಿತದೃಷ್ಟಿಯಿಂದ ದರ ನಿಗದಿ ಮಾಡಲು ಕೋರಿರುತ್ತಾರೆ. ಈ ಕೋರಿಕೆಯನ್ನು ಪರಿಶೀಲಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆರ್‌ಡಿ 74 ಟಿಎಸ್‌ವೈ 2003, ಬೆಂಗಳೂರು, ದಿನಾಂಕ: 21ನೇ ಅಕ್ಟೋಬರ್ 2003**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಬರಪೀಡಿತ ಪ್ರದೇಶಗಳಲ್ಲಿ ಗೋಶಾಲೆ ತೆರೆಯುವ ಸಲುವಾಗಿ ಮತ್ತು ಮೇವು ಬ್ಯಾಂಕ್ ಉದ್ದೇಶಕ್ಕಾಗಿ ಈಗಾಗಲೇ ಮೇಲೆ (1)ರಲ್ಲಿ ಓದಲಾದ ಆದೇಶದಲ್ಲಿ ನಿಗದಿಪಡಿಸಿರುವ ವಿವಿಧ ಮೇವಿನ ದರದ ಜೊತೆಗೆ ಮುಸುಕಿನ ಜೋಳದ ಸಪ್ಪೆಗೆ (ತೆನೆ ಕೊಯ್ದ ನಂತರ) ಸಂಬಂಧಿಸಿದಂತೆ ಪ್ರತಿ ಟನ್‌ಗೆ ರೂ. 750.00 ರಂತೆ ದಿನಾಂಕ: 15.11.2003 ರವರೆಗೆ ಮಾತ್ರ ಖರೀದಿಸಲು ಮಂಜೂರಾತಿ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1410

**ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ, (ಪರಿಹಾರ ಮತ್ತು ಸೇವೆಗಳು-2).

**ಸೇರ್ಪಡೆ**

**ಸಂಖ್ಯೆ: ಆರ್‌ಡಿ: 689 ಟಿಎನ್‌ಆರ್ 2003 ಬೆಂಗಳೂರು, ದಿನಾಂಕ: 27ನೇ ಸೆಪ್ಟೆಂಬರ್ 2003**

ಸರ್ಕಾರಿ ಆದೇಶ ಸಂಖ್ಯೆ: ಆರ್‌ಡಿ 689 ಟಿಎನ್‌ಆರ್ 2003 ದಿನಾಂಕ: 23.9.2003ರಲ್ಲಿ 2003ರ ಹಿಂಗಾರು ಹಂಗಾಮಿನಲ್ಲಿ ಪ್ರಕೃತಿ ವಿಕೋಪ ಪರಿಹಾರ ನಿಧಿಯಡಿಯಲ್ಲಿ ಬಿತ್ತನೆ ಬೀಜ ವಿತರಣೆಗಾಗಿ ಬಿಡುಗಡೆ ಮಾಡಿರುವ ರೂ.10.00 ಕೋಟಿಗಳಲ್ಲಿ ಬಿತ್ತನೆ ಬೀಜದ ಜೊತೆಗೆ ಶೇ.50ರ ರಿಯಾಯಿತಿ ದರದಲ್ಲಿ ಒಂದು ಹೆಕ್ಟೆರಿಗೆ ಮಾತ್ರ 250 ಕೆ. ಜಿ. ಅಗ್ರಿಗೋಲ್ಡ್ ಗೊಬ್ಬರವನ್ನು ವಿತರಿಸಲು ಕ್ರಮ ತೆಗೆದುಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1411

**ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ.

(ಪರಿಹಾರ ಮತ್ತು ಸೇವೆಗಳು-2).

**ವಿಷಯ :** ಶ್ರೀ ಆರ್.ಟಿ ಕೃಷ್ಣಪ್ಪ, ಹಿಂದಿನ ಶಿರಸ್ತೇದಾರ್, ತಾಲ್ಲೂಕು ಕಛೇರಿ, ಬೆಂಗಳೂರು ಉತ್ತರ ತಾಲ್ಲೂಕು, ಹಾಲಿ ತಹಶೀಲ್ದಾರ್ ನೆಲಮಂಗಲ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಮತ್ತಿತರರ ವಿರುದ್ಧ ಜಂಟಿ ಇಲಾಖಾ ವಿಚಾರಣೆ ಜರುಗಿಸುವ ಕುರಿತು.

**ಓದಲಾಗಿದೆ :** 1) ಹಿಂದಿನ ವಿಭಾಗಾಧಿಕಾರಿ, ಬೆಂಗಳೂರು ವಿಭಾಗ, ಬೆಂಗಳೂರು ಇವರ ದಿನಾಂಕ: 8.3.2001ರ ಪತ್ರ ಸಂಖ್ಯೆ: ಸಿಸಿಎ:53: 2000-01.

2) ಶ್ರೀ ಆರ್.ಟಿ. ಕೃಷ್ಣಪ್ಪ, ತಹಶೀಲ್ದಾರ್ ನೆಲಮಂಗಲ ತಾಲ್ಲೂಕು, ಶ್ರೀ ಅಬ್ಬಾಸ್ ಅಲಿ, ಹಿಂದಿನ ಶಿರಸ್ತೇದಾರ್, ಬೆಂಗಳೂರು ಉತ್ತರ ತಾಲ್ಲೂಕು ಕಛೇರಿ, ಶ್ರೀ ಎ. ಆರ್. ಮುನಿಸ್ವಾಮಿ, ಹಿಂದಿನ ಆರ್.ಆರ್. ಶಿರಸ್ತೇದಾರ್, ಬೆಂಗಳೂರು ಉತ್ತರ ತಾಲ್ಲೂಕು ಕಛೇರಿ, ಶ್ರೀ ಬಿ. ಶಿವನಂಜಪ್ಪ, ಹಿಂದಿನ ದ್ವಿ.ದ.ಸ., ಬೆಂಗಳೂರು ಉತ್ತರ ತಾಲ್ಲೂಕು ಕಛೇರಿ ಮತ್ತು ಸಿ. ರಾಮಲಕ್ಷ್ಮಯ್ಯ, ಹಿಂದಿನ ದ್ವಿ.ದ.ಸ. (ಅಭಿಲೇಖಾಲಯ) ಬೆಂಗಳೂರು ಉತ್ತರ ತಾಲ್ಲೂಕು ಕಛೇರಿ ಇವರುಗಳಿಗೆ ದಿನಾಂಕ: 30.7.01ರ ಕಾರಣ ಕೇಳುವ ನೋಟೀಸು ಸಂಖ್ಯೆ: ಆರ್‌ಡಿ 32 ಎಡಿಇ 2001ರೊಂದಿಗೆ ಜಾರಿಗೊಳಿಸಲಾದ ದೋಷಾರೋಪಣೆ ಪಟ್ಟಿಗಳು.

3) ಕಾರಣ ಕೇಳುವ ನೋಟೀಸುಗಳಿಗೆ ಲಿಖಿತ ಉತ್ತರ:
   1. ಶ್ರೀ ಆರ್. ಟಿ. ಕೃಷ್ಣಪ್ಪ, ತಹಶೀಲ್ದಾರ್, ನೆಲಮಂಗಲ ತಾಲ್ಲೂಕು ದಿನಾಂಕ: 27.8.2001.
   2. ಶ್ರೀ ಸೈಯದ್ ಅಬ್ಬಾಸ್ ಅಲಿ, ಭೂ ಸುಧಾರಣಾ ಲೆಕ್ಕ ಪರಿಶೋಧಕ, ಹಿಂದಿನ ವಿಭಾಗಾಧಿಕಾರಿಗಳ ಕಛೇರಿ, ಬೆಂಗಳೂರು ವಿಭಾಗ, 13.8.01.
   3. ಶ್ರೀ ಬಿ. ಶಿವನಂಜಪ್ಪ, ದ್ವಿ.ದ.ಸ. ಸಹಾಯಕ ಆಯುಕ್ತರ ಕಛೇರಿ ಬೆಂಗಳೂರು ಉತ್ತರ ಉಪ ವಿಭಾಗ 20.9.2001.
   4. ಶ್ರೀ ಎ. ಆರ್. ಮುನಿಸ್ವಾಮಿ, ವ್ಯವಸ್ಥಾಪಕ ತಾಲ್ಲೂಕು ಪಂಚಾಯಿತಿ ಬೆಂಗಳೂರು ದಕ್ಷಿಣ ತಾಲ್ಲೂಕು ದಿನಾಂಕ: 27.9.2001.

**ಪ್ರಸ್ತಾವನೆ:**

ಬೆಂಗಳೂರು ಉತ್ತರ ತಾಲ್ಲೂಕು ಯಶವಂತಪುರ ಹೋಬಳಿ ಲಗ್ಗೆರೆ ಗ್ರಾಮದ ಸ.ನಂ. 8:4 ರಲ್ಲಿನ 3 ಎಕರೆ 4 ಗುಂಟೆ ವಿಸ್ತೀರ್ಣದ ಜಮೀನಿನ ಪಹಣಿಗಳನ್ನು ಫೋರ್ಜರಿ ಮಾಡಿ ಅಕ್ರಮವಾಗಿ ಕೆಲವು ಪಹಣಿಯ ಪುಟಗಳನ್ನು ಸೇರಿಸಲಾಗಿದೆಯೆಂದು ಶ್ರೀ ಪಿ.ಬಿ. ಸುದರ್ಶನ್ ಬಿನ್ ಲೇಟ್ ಪಿ. ವಿ. ಗೋಪಾಲ ಐಯಂಗಾರ್ ಇವರು ಹಿಂದಿನ ಬೆಂಗಳೂರು ವಿಭಾಗಾಧಿಕಾರಿಯವರಿಗೆ ದೂರು ಅರ್ಜಿಸಲ್ಲಿಸಿದ್ದರ ಮೇರೆಗೆ, ವಿಭಾಗಾಧಿಕಾರಿಯವರ ಸೂಚನೆಯಂತೆ ಸದರಿ ಆರೋಪಗಳ ಬಗ್ಗೆ ಬೆಂಗಳೂರು ಉತ್ತರ ಉಪ ವಿಭಾಗಾಧಿಕಾರಿಗಳು ಪ್ರಥಮ ತನಿಖೆ ನಡೆಸಿ 1970-71 ರಿಂದ 1997-98ನೇ ಸಾಲಿನವರೆಗೆ ಶ್ರೀ ವೆಂಕಟಪ್ಪ ಬಿನ್ ಗುರಪ್ಪ ಎಂಬುವವರ ಹೆಸರಿರುವ ಪಹಣಿಯನ್ನು ಅಕ್ರಮವಾಗಿ ಸೇರಿಸಿರುವುದು ದೃಢಪಟ್ಟಿರುತ್ತದೆಯೆಂದು ವರದಿ ಮಾಡಿರುವರೆಂದು ತಿಳಿಸಿರುವ ವಿಭಾಗಾಧಿಕಾರಿಯವರು ಅರ್ಜಿದಾರರ ಆರೋಪಗಳಲ್ಲಿ ಸತ್ಯಾಂಶಗಳಿವೆ ಎಂಬುದನ್ನು ಮನಗಂಡು ಈ ಕೆಳಕಂಡ ನೌಕರರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆ ಜರುಗಿಸಲು ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಪತ್ರದಲ್ಲಿ ಸರ್ಕಾರವನ್ನು ಕೋರಿರುತ್ತಾರೆ.

**ಶ್ರೀಯುತರು:**

1. ಎಂ. ರಾಮಕೃಷ್ಣ, ಹಿಂದಿನ ಶಿರಸ್ತೇದಾರ್, ತಾಲ್ಲೂಕು ಕಛೇರಿ, ಬೆಂಗಳೂರು ಉತ್ತರ ತಾಲ್ಲೂಕು ಹಾಲಿ ನಿವೃತ್ತ ಕೆ.ಎ.ಎಸ್. (ಕಿರಿಯ ಶ್ರೇಣಿ) ಅಧಿಕಾರಿ.
2. ಆರ್.ಟಿ. ಕೃಷ್ಣಪ್ಪ, ಹಿಂದಿನ ಶಿರಸ್ತೇದಾರ್, ತಾಲ್ಲೂಕು ಕಛೇರಿ, ಬೆಂಗಳೂರು ಉತ್ತರ ತಾಲ್ಲೂಕು, ಹಾಲಿ ತಹಶೀಲ್ದಾರ್, ನೆಲಮಂಗಲ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ.
3. ಅಬ್ಬಾಸ್ ಅಲಿ, ಹಿಂದಿನ ಶಿರಸ್ತೇದಾರ್, ಬೆಂಗಳೂರು ಉತ್ತರ ತಾಲ್ಲೂಕು ಕಛೇರಿ.
4. ಎ. ಆರ್. ಮುನಿಸ್ವಾಮಿ, ಹಿಂದಿನ ಆರ್.ಆರ್. ಶಿರಸ್ತೇದಾರ್, ಬೆಂಗಳೂರು ಉತ್ತರ ತಾಲ್ಲೂಕು ಕಛೇರಿ.
5. ಪುಟ್ಟರೇವಣ್ಣ, ಹಿಂದಿನ ವಿಷಯ ನಿರ್ವಾಹಕ, ಬೆಂಗಳೂರು ಉತ್ತರ ತಾಲ್ಲೂಕು ಕಛೇರಿ.
6. ಬಿ. ಶಿವನಂಜಪ್ಪ, ಹಿಂದಿನ ದ್ವಿ.ದ.ಸ., ಬೆಂಗಳೂರು ಉತ್ತರ ತಾಲ್ಲೂಕು ಕಛೇರಿ.
7. ಸಿ. ರಾಮಲಕ್ಷ್ಮಯ್ಯ, ಹಿಂದಿನ ದ್ವಿ.ದ.ಸ., (ಅಭಿಲೇಖಾಲಯ) ಬೆಂಗಳೂರು ಉತ್ತರ ತಾಲ್ಲೂಕು ಕಛೇರಿ.

ಈ ಮೇಲಿನ ಆರೋಪಿತರಲ್ಲಿ ಶ್ರೀ ಎಂ. ರಾಮಕೃಷ್ಣ, ನಿವೃತ್ತ ಕೆ. ಎ.ಎಸ್. (ಕಿರಿಯ ಶ್ರೇಣಿ) ಅಧಿಕಾರಿ ಮತ್ತು ಶ್ರೀ ಪುಟ್ಟರೇವಣ್ಣ, ಹಿಂದಿನ ವಿಷಯ ನಿರ್ವಾಹಕ, ಬೆಂಗಳೂರು ಉತ್ತರ ತಾಲ್ಲೂಕು ಕಛೇರಿ, ಇವರುಗಳು ಸೇವೆಯಿಂದ ನಿವೃತ್ತರಾಗಿರುವುದರಿಂದ ಅವರುಗಳ ವಿರುದ್ಧ ಕರ್ನಾಟಕ ನಾಗರೀಕಸೇವಾ ನಿಯಮಾವಳಿಗಳ ನಿಯಮ 214 ರಡಿಯಲ್ಲಿ ಶಿಸ್ತು ಕ್ರಮ ಜರುಗಿಸುವಂತೆ, ಹಿಂದಿನ ಬೆಂಗಳೂರು ವಿಭಾಗಾಧಿಕಾರಿಯವರು ತಮ್ಮ ಪ್ರಸ್ತಾವನೆಯಲ್ಲಿ ಕೋರಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಲಾಗಿ, ಈ ಪ್ರಕರಣದಲ್ಲಿನ ಘಟನೆಯು ಹಿಂದಿನ ಬೆಂಗಳೂರು ವಿಭಾಗಾಧಿಕಾರಿಯವರು ಸಲ್ಲಿಸಿರುವ ಆರೋಪಣಾ ಪಟ್ಟಿಗಳ ಪ್ರಕಾರ 1990-95ರಲ್ಲಿ ನಡೆದಿರುವುದಾಗಿ ತಿಳಿಸಿದ್ದು ಈ ಕಾರಣದಿಂದ ಶ್ರೀ ಎಂ. ರಾಮಕೃಷ್ಣ ಮತ್ತು ಶ್ರೀ ಪುಟ್ಟರೇವಣ್ಣ ಇವರುಗಳು ಸೇವೆಯಿಂದ ನಿವೃತ್ತರಾಗಿರುವುದರಿಂದ, ಇವರುಗಳ ವಿರುದ್ಧ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 214 ರಡಿಯಲ್ಲಿ ಈಗ ಶಿಸ್ತು ಕ್ರಮ ಜರುಗಿಸಲು ಬರುವುದಿಲ್ಲವೆಂದು ನಿರ್ಧರಿಸಿ ಇವರನ್ನು ಹೊರತುಪಡಿಸಿ ಇನ್ನಿತರ 5 ಮಂದಿ ನೌಕರರ ವಿರುದ್ಧ ಶಿಸ್ತು ಕ್ರಮ ಜರುಗಿಸುವ ಉದ್ದೇಶದಿಂದ ಸಂಬಂಧಿಸಿದ 5 ಮಂದಿ ನೌಕರರಿಗೆ ಇವರುಗಳ ವಿರುದ್ಧದ ದೋಷಾರೋಪಣೆಗಳನ್ನೊಳಗೊಂಡ ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಕಾರಣ ಕೇಳುವ ನೋಟೀಸ್‌ಗಳನ್ನು 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ನಿಯಮ 13ರ ಮೇರೆಗೆ ಜಾರಿ ಮಾಡಿ ಸದರಿ ಆರೋಪಗಳ ಬಗ್ಗೆ ಅವರವರ ಲಿಖಿತ ಹೇಳಿಕೆಯನ್ನು ಸಲ್ಲಿಸುವಂತೆ ಸೂಚಿಸಲಾಗಿತ್ತು. ಇದಕ್ಕೆ ಉತ್ತರವಾಗಿ ಮೇಲೆ ಕ್ರಮ ಸಂಖ್ಯೆ (3)ರಲ್ಲಿ ಓದಲಾದ ವಿವಿಧ ದಿನಾಂಕಗಳಂದು ಸಲ್ಲಿಸಿರುವ ಲಿಖಿತ ಉತ್ತರಗಳಲ್ಲಿ ಆರೋಪಿತರ ವಿರುದ್ಧದ ಆರೋಪಗಳನ್ನು ಒಪ್ಪಿಕೊಂಡಿರುವುದಿಲ್ಲ. ಅಲ್ಲದೆ ಈ ಪ್ರಕರಣದಲ್ಲಿನ 5 ಮಂದಿ ಆರೋಪಿತರಲ್ಲಿ ಒಬ್ಬರಾದ ಶ್ರೀ ಸಿ. ರಾಮಲಕ್ಷ್ಮಯ್ಯ, ಎಂಬುವವರು ಅವರಿಗೆ ಜಾರಿಗೊಳಿಸಲಾಗಿದ್ದ ಕಾರಣ ಕೇಳುವ ನೋಟೀಸಿನಲ್ಲಿ ನಿಗದಿಗೊಳಿಸಲಾಗಿದ್ದ ಸಮಯದೊಳಗೆ ಹಾಗೂ ಇಂದಿನವರೆಗೆ ಅವರ ಲಿಖಿತ ಹೇಳಿಕೆಯನ್ನು ಸರ್ಕಾರಕ್ಕೆ ಸಲ್ಲಿಸಿರುವುದಿಲ್ಲ. ಈ ಹಿನ್ನೆಲೆಯಲ್ಲಿ ಸದರಿ ಆರೋಪಗಳ ಬಗ್ಗೆ ಅವರು ಹೇಳುವುದು ಏನು ಇಲ್ಲವೆಂದು ಭಾವಿಸಿ ಉಳಿದ ಆರೋಪಿತರ ವಿರುದ್ಧದ ಆರೋಪಗಳು ಹಾಗೂ ಅವರುಗಳು ಸಲ್ಲಿಸಿರುವ ಲಿಖಿತ ಉತ್ತರಗಳ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವ ದೃಷ್ಟಿಯಿಂದ ಈ 5 ಮಂದಿ ಆರೋಪಿತರ ವಿರುದ್ಧ ಜಂಟಿ ಇಲಾಖಾ ವಿಚಾರಣೆ ಜರುಗಿಸಲು ಸರ್ಕಾರವು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 32 ಎಡಿಇ 2001, ಬೆಂಗಳೂರು, ದಿನಾಂಕ: 30ನೇ ಅಕ್ಟೋಬರ್ 2003**

ಪ್ರಸ್ತಾವನೆಯಲ್ಲಿ ಕೂಲಂಕಷವಾಗಿ ಪರಿಶೀಲಿಸಿರುವ ಹಿನ್ನೆಲೆಯಲ್ಲಿ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ನಿಯಮ 13 ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರಕಾರವು

ಶ್ರೀ ವೈ. ಆರ್. ಸಾವ್‌ಕಾರ್, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ನಂ. 409, 1ನೇ "ಎನ್" ಬ್ಲಾಕ್, 19ನೇ "ಜಿ" ಮುಖ್ಯ ರಸ್ತೆ, ರಾಜಾಜಿನಗರ, ಬೆಂಗಳೂರು-10 ಇವರನ್ನು ವಿಚಾರಣಾಧಿಕಾರಿಯನ್ನಾಗಿ ಈ ಕೆಳಕಂಡ ಆರೋಪಿತರ ವಿರುದ್ಧದ ಆರೋಪಗಳ ಬಗ್ಗೆ ಜಂಟಿ ಇಲಾಖಾ ವಿಚಾರಣೆ ಜರುಗಿಸಲು ನೇಮಿಸಿದೆ.

**ಶ್ರೀಯುತರು:**

1. ಶ್ರೀ ಆರ್. ಟಿ. ಕೃಷ್ಣಪ್ಪ, ಹಿಂದಿನ ಶಿರಸ್ತೇದಾರ್ ತಾಲ್ಲೂಕು ಕಛೇರಿ, ಬೆಂಗಳೂರು ಉತ್ತರ ತಾಲ್ಲೂಕು ಹಾಲಿ ತಹಶೀಲ್ದಾರ್, ನೆಲಮಂಗಲ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ.
2. ಅಬ್ಬಾಸ್ ಅಲಿ, ಹಿಂದಿನ ಶಿರಸ್ತೇದಾರ್, ಬೆಂಗಳೂರು ಉತ್ತರ ತಾಲ್ಲೂಕು ಕಛೇರಿ.
3. ಎ. ಆರ್. ಮುನಿಸ್ವಾಮಿ, ಹಿಂದಿನ ಆರ್. ಆರ್. ಶಿರಸ್ತೇದಾರ್, ಬೆಂಗಳೂರು ಉತ್ತರ ತಾಲ್ಲೂಕು ಕಛೇರಿ.
4. ಬಿ. ಶಿವನಂಜಪ್ಪ, ಹಿಂದಿನ ದ್ವಿ.ದ.ಸ., ಬೆಂಗಳೂರು ಉತ್ತರ ತಾಲ್ಲೂಕು ಕಛೇರಿ.
5. ಸಿ. ರಾಮಲಕ್ಷ್ಮಯ್ಯ, ಹಿಂದಿನ ದ್ವಿ.ದ.ಸ. (ಅಭಿಲೇಖಾಲಯ) ಬೆಂಗಳೂರು ಉತ್ತರ ತಾಲ್ಲೂಕು ಕಛೇರಿ.

ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 11(5)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಬೆಂಗಳೂರು ಗ್ರಾಮಾಂತರ ಜಿಲ್ಲಾಧಿಕಾರಿಗಳ ಕಛೇರಿಯ ಕೇಂದ್ರಸ್ಥಾನಿಕ ಸಹಾಯಕರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿದೆ.

ವಿಚಾರಣಾಧಿಕಾರಿಗಳು ವಿಚಾರಣೆಯನ್ನು ಬೆಂಗಳೂರು ನಗರ ಜಿಲ್ಲಾಧಿಕಾರಿಗಳ ಕಛೇರಿಯ ಆವರಣದಲ್ಲಿ ಅಥವಾ ಅವರು ಗುರುತಿಸಿ ನಿಗದಿಪಡಿಸಿದ ಸ್ಥಳದಲ್ಲಿ ಜಂಟಿ ಇಲಾಖಾ ವಿಚಾರಣೆಯನ್ನು ನಡೆಸತಕ್ಕದ್ದು. ಈ ಉದ್ದೇಶಕ್ಕಾಗಿ ಲಭ್ಯವಿರುವ ಕಛೇರಿಗಳಲ್ಲಿ ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶವನ್ನು ಮಾಡುವುದು ಹಾಗೂ ಸಂಬಂಧಿಸಿದ ಕಛೇರಿಯಲ್ಲಿ ಲಭ್ಯವಿರುವ ಶೀಘ್ರಲಿಪಿಗಾರರ: ಬೆರಳಚ್ಚುಗಾರರ ಸಹಾಯವನ್ನು ಹಾಗೂ ಲೇಖನ ಸಾಮಗ್ರಿಗಳನ್ನು ಒದಗಿಸತಕ್ಕದ್ದು.

ಈ ಪ್ರಕರಣದ ವಿಚಾರಣೆಗಾಗಿ ವಿಚಾರಣಾಧಿಕಾರಿಗಳಿಗೆ ರೂ. 5000-(ಐದು ಸಾವಿರ ರೂಪಾಯಿಗಳು ಮಾತ್ರ) ಸಂಚಿತ ಸಂಭಾವನೆಯನ್ನು ಹಾಗೂ ದಿನಾಂಕ: 4.3.02ರ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 45 ಸೇಆವಿ 2001 ರನ್ವಯ 1000-(ಒಂದು ಸಾವಿರ ರೂಪಾಯಿಗಳು ಮಾತ್ರ) ರೂ.ಗಳ ವಾಹನ ಭತ್ಯೆ (ಕನ್ವೇಯನ್ಸ್‌ಅಲೋಯೆನ್ಸ್) ನ್ನು ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ ನಂತರ ಬೆಂಗಳೂರು ನಗರ ಜಿಲ್ಲಾಧಿಕಾರಿಗಳು ಪಾವತಿ ಮಾಡತಕ್ಕದ್ದು.

ವಿಚಾರಣಾಧಿಕಾರಿಗಳು ಇಲಾಖಾ ವಿಚಾರಣೆಯನ್ನು ಮೇಲ್ಕಂಡ ನಿಯಮಗಳ ನಿಯಮ 11 ಮತ್ತು 11(ಎ) ರಲ್ಲಿನ ವಿಧಿ ವಿಧಾನಗಳನ್ವಯ ಜರುಗಿಸಿ ವಿಚಾರಣಾ ವರದಿಯನ್ನು ಎರಡು ತಿಂಗಳೊಳಗಾಗಿ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1412 **ಎಂ. ಎಸ್. ಮಹಂತೇಶಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ, (ಸೇವೆಗಳು-3).

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ :** ಶ್ರೀ ಬಿ. ನಿಂಗೇಗೌಡ, ನಿವೃತ್ತ ಕೆಎಎಸ್ ಅಧಿಕಾರಿ ಅವರ ವಿರುದ್ಧ ಇಲಾಖಾ ವಿಚಾರಣೆ-ದಂಡನೆ ವಿಧಿಸಿ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ :**
1) ಸರ್ಕಾರದ ಆದೇಶ ಕ್ರಮಾಂಕ: ಸಿಆಸುಇ 141 ಎಸ್‌ಇಎನ್ 91, ದಿನಾಂಕ: 13.10.1993.
2) ಅಡಿಷನಲ್ ರಿಜಿಸ್ಟ್ರಾರ್, ವಿಚಾರಣೆಗಳು-4, ಕರ್ನಾಟಕ ಲೋಕಾಯುಕ್ತ ಅವರ ವಿಚಾರಣಾ ವರದಿ ಕ್ರಮಾಂಕ: ಲೋಕ್:ಎಆರ್‌ಇ-4: ಇಎನ್‌ಕ್ಯೂ-10: 93-94, ದಿನಾಂಕ: 28.8.1996.
3) ನೋಟೀಸ್ ಕ್ರಮಾಂಕ: ಸಿಆಸುಇ 141 ಎಸ್‌ಇಎನ್ 91, ದಿನಾಂಕ: 29: 30.5.2003.
4) ಶ್ರೀ ಬಿ. ನಿಂಗೇಗೌಡ, ನಿವೃತ್ತ ಕೆಎಎಸ್ ಅಧಿಕಾರಿ, ಅವರ ಉತ್ತರ ದಿನಾಂಕ: 8.7.2003.
5) ಕಾರ್ಯದರ್ಶಿ, ಕರ್ನಾಟಕ ಲೋಕ ಸೇವಾ ಆಯೋಗ, ಅವರ ಪತ್ರ ಕ್ರಮಾಂಕ:ಪಿಎಸ್‌ಸಿ: 61:ಸಿಎನ್‌ಎಸ್: 2003 ದಿನಾಂಕ: 16.9.2003.

**ಪ್ರಸ್ತಾವನೆ:**

ಮಂಡ್ಯ ಜಿಲ್ಲಾಧಿಕಾರಿಗಳ ಕೇಂದ್ರ ಸ್ಥಾನಿಕ ಸಹಾಯಕರಾಗಿ ಕಾರ್ಯನಿರ್ವಹಿಸುತ್ತಿದ್ದಾಗ ಮಂಡ್ಯ ಜಿಲ್ಲೆಯಲ್ಲಿನ ನಾಗಮಂಗಲ ಮತ್ತು ಮಳವಳ್ಳಿ ತಾಲ್ಲೂಕಿನ ಗ್ರಾಮಗಳ ದೇವಾಲಯಗಳಿಗೆ ತಸ್ದೀಕ್ ಹಣವನ್ನು ನಿಗದಿಪಡಿಸುವಲ್ಲಿ ಅಕ್ರಮ ಎಸಗಿದ ಆರೋಪಕ್ಕಾಗಿ ಶ್ರೀ ಬಿ. ನಿಂಗೇಗೌಡ, ಕೆಎಎಸ್ ಅಧಿಕಾರಿ ಅವರ ವಿರುದ್ಧ ಮೇಲೆ (1) ರಲ್ಲಿ ಓದಲಾದ ದಿನಾಂಕ: 13.10.1993ರ ಸರ್ಕಾರಿ ಆದೇಶದಲ್ಲಿ ಇಲಾಖಾ ವಿಚಾರಣೆಯನ್ನು ಆದೇಶಿಸಿ ಆಡಿಷನಲ್ ರಿಜಿಸ್ಟ್ರಾರ್ ವಿಚಾರಣೆಗಳು-4 ಕರ್ನಾಟಕ ಲೋಕಾಯುಕ್ತ, ಬೆಂಗಳೂರು ರವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಯಿತು. ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳು ದಿನಾಂಕ: 28.8.1996 ರ ವಿಚಾರಣಾ ವರದಿ ಸಲ್ಲಿಸಿ ಶ್ರೀ ಬಿ. ನಿಂಗೇಗೌಡ, ನಿವೃತ್ತ ಕೆಎಎಸ್ ಅಧಿಕಾರಿ ಅವರ ವಿರುದ್ಧ ಆರೋಪಗಳಿಗೆ ಸಂಬಂಧಿಸಿದಂತೆ ಈ ಕೆಳಕಂಡ ನಿರ್ಣಯ ನೀಡಿದರು.

ನಾಗಮಂಗಲದ ಭುವನೇಶ್ವರಿ ದೇವಾಲಯದ ಜಮೀನಿಗೆ ತಸ್ದೀಕ್ ಹಣವನ್ನು ನಿಗದಿಪಡಿಸುವಂತಿಲ್ಲವೆಂದು ತನ್ನ ಅಧೀನ ಅಧಿಕಾರಿಗಳು ತಿಳಿಸಿದ್ದರೂ ಸಹ ಆರೋಪಿಯು ರೂ. 46,038-00ಗಳನ್ನು ನಿಗದಿಪಡಿಸಿರುವುದು, ಉತ್ತರಾಧಿಮಠಕ್ಕೆ ಸೇರಿದ ಹಾಗೂ ನಾಗಮಂಗಲದಲ್ಲಿ ಇರುವ ಜಮೀನು ಸರ್ಕಾರಕ್ಕೆ ವಿಹಿತಗೊಂಡಿದೆಯೇ ಅಥವಾ ಇಲ್ಲವೇ ಎಂಬುದನ್ನು ಪರಿಶೀಲಿಸದೇ

ರೂ. 21,792-00ಗಳ ತಸ್ದೀಕ್ ನಿಗದಿಪಡಿಸಿರುವುದು ಸಾಬೀತಾಗಿದೆ. ಹಾಗೆಯೇ ಮಳವಳ್ಳಿ ತಾಲ್ಲೂಕು ಅಲಗೂರಿನ ವಿನಾಯಕ ದೇವರ ದೇವಸ್ಥಾನ ಹಾಗೂ ಭೈರವೇಶ್ವರ ದೇವಸ್ಥಾನದ ಜಮೀನುಗಳಿಗೆ ಸಂಬಂಧಿಸಿದಂತೆ ಕ್ವಿಟ್ ರೆಂಟ್ ರಿಜಿಸ್ಟರ್ ಇಲ್ಲದಿದ್ದರೂ ತಲಾ ರೂ. 12,636-00 ತಸ್ದೀಕ್ ಅನ್ನು ನಿಗದಿಪಡಿಸಿರುತ್ತಾರೆ. ಹಾಗೆಯೇ ಸೋಮನಹಳ್ಳಿಯ ವಿಶ್ವೇಶ್ವರ ದೇವಸ್ಥಾನಕ್ಕೆ ಸೇರಿದ ಜಮೀನಿನ ವಿಸ್ತೀರ್ಣ 5.02 ಗುಂಟೆ ಇದ್ದರೂ ಸಹ ಆರೋಪಿಯು ಮಳವಳ್ಳಿ ತಹಶೀಲ್ದಾರ್‌ರೊಡನೆ ಶಾಮೀಲಾಗಿ 25 ಎಕರೆ 2 ಗುಂಟೆಗೆ ತಸ್ದೀಕ್ ನಿಗದಿಪಡಿಸಿ 50,562-00 ರೂಪಾಯಿಗಳ ನಷ್ಟ ಉಂಟು ಮಾಡಿರುವುದು ಕಂಡು ಬರುತ್ತದೆ. ಹೀಗೆ ವಿವಿಧ ಒಟ್ಟು 6 ಪ್ರಕರಣಗಳಲ್ಲಿ ಸರ್ಕಾರಕ್ಕೆ ಉಂಟಾಗಿರುವ ನಷ್ಟದ ಮೊತ್ತ 2,56,982-00 ರೂಪಾಯಿಗಳು ಇದರಲ್ಲಿ ವಿಶ್ವೇಶ್ವರ ದೇವರ ದೇವಸ್ಥಾನದ ಜಮೀನಿನ ಪ್ರಕರಣದಲ್ಲಿ ತಹಶೀಲ್ದಾರ್‌ರವರೊಡನೆ ಶಾಮೀಲಾಗಿ ತಸ್ದೀಕ್ ಹಣವನ್ನು ನಿಗದಿಪಡಿಸಿದ್ದರೂ ಸಹ ಆ 50,562-00 ರೂಪಾಯಿಗಳ ಪೈಕಿ 25,000-00 ರೂಪಾಯಿಗಳಿಗೆ ಮಾತ್ರ ಆರೋಪಿತ ನಿವೃತ್ತ ಅಧಿಕಾರಿಯು ಜವಾಬ್ದಾರರಾಗಿರುತ್ತಾರೆ. ಹೀಗಾಗಿ ರೂ. 2,56,982-00 ರಲ್ಲಿ 25,562-00 ರೂಪಾಯಿಗಳನ್ನು ಕಳೆದು ಉಳಿದ ಒಟ್ಟು 2,31,420-00 ರೂಪಾಯಿಗಳ ಆರ್ಥಿಕ ನಷ್ಟವನ್ನು ಸರ್ಕಾರಕ್ಕೆ ಉಂಟು ಮಾಡಿದ್ದಾರೆ. ಹೀಗಾಗಿ ಅವರ ವಿರುದ್ಧದ 7 ಆರೋಪಗಳು ಸಾಬೀತಾಗಿವೆ.

ಮೇಲ್ಕಂಡ ವಿಚಾರಣಾ ವರದಿಯು ಸರ್ಕಾರದ ಪರಿಶೀಲನೆಯಲ್ಲಿದ್ದಾಗ ಶ್ರೀ ಬಿ. ನಿಂಗೇಗೌಡ, ಕೆಎಎಸ್ ಅಧಿಕಾರಿ ಅವರು 31.8.1998 ರಂದು ವಯೋನಿವೃತ್ತಿ ಹೊಂದಿದರು ವಿಚಾರಣಾ ವರದಿಯನ್ನು ಸರ್ಕಾರವು ಪರಿಶೀಲಿಸಿ ಅದು ಸಮರ್ಪಕವಾಗಿ ಕಂಡು ಬಂದ ಕಾರಣ ವಿಚಾರಣಾ ವರದಿಯನ್ನು ಒಪ್ಪಿಗೊಂಡು ಶ್ರೀ ಬಿ. ನಿಂಗೇಗೌಡ ನಿವೃತ್ತ ಕೆಎಎಸ್ ಅಧಿಕಾರಿ ಅವರಿಗೆ ದಿನಾಂಕ: 29: 30.5.2003ರ ಎರಡನೇ ಕಾರಣ ಕೇಳುವ ನೋಟೀಸ್ ನೀಡಿ ಸಾಬೀತಾಗಿರುವ ಆರೋಪಗಳಿಗೆ ಅನುಗುಣವಾಗಿ ಅವರು ಎಸಗಿದ ದುರ್ನಡತೆಯಿಂದಾಗಿ ಸರ್ಕಾರಕ್ಕೆ ಉಂಟಾದ ಆರ್ಥಿಕ ನಷ್ಟ ರೂ.2,31,420-00ಗಳನ್ನು ಅವರ ನಿವೃತ್ತ ಸೌಲಭ್ಯಗಳಿಂದ ಏಕೆ ವಸೂಲಿ ಮಾಡಬಾರದು ಹಾಗೂ ಸಾಬೀತಾದ ದುರ್ನಡತೆಗಾಗಿ ಅವರ ಮಾಸಿಕ ವಿಶ್ರಾಂತಿ ವೇತನದಿಂದ ಮಾಹೆಯಾನ 500-00 ರೂಪಾಯಿಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ನಿರಂತರವಾಗಿ ಏಕೆ ಕಡಿತಗೊಳಿಸಬಾರದೆಂಬುದಕ್ಕೆ ವಿವರಣೆಯನ್ನು ಕೇಳಲಾಯಿತು. ಈ ನೋಟೀಸ್‌ಗೆ ಆರೋಪಿತ ನಿವೃತ್ತ ಕೆಎಎಸ್ ಅಧಿಕಾರಿಯವರು ದಿನಾಂಕ: 8.7.2003ರ ಉತ್ತರ ಸಲ್ಲಿಸಿ ತಾನು ಯಾವುದೇ ರೀತಿಯ ಕಾನೂನಿಗೆ ವಿರುದ್ಧವಾದಂತಹ ಕೆಲಸಗಳನ್ನು ಮಾಡಿರುವುದಿಲ್ಲ ಸರ್ಕಾರಕ್ಕೆ ಉಂಟಾದ ಆರ್ಥಿಕ ನಷ್ಟವಾದ ರೂ.2,31,420-00 ಗಳಿಗೆ ತಾವು ಜವಾಬ್ದಾರರಲ್ಲವೆಂದು ತಿಳಿಸಿ ವಯೋ ನಿವೃತ್ತಿಹೊಂದಿ 5 ವರ್ಷಗಳು ಆದ ಮೇಲೆ ಎರಡನೇ ಕಾರಣ ಕೇಳುವ ನೋಟೀಸ್ ಕೊಟ್ಟಿರುವುದು ತುಂಬಾ ಶೋಚನೀಯವೆಂದು ತಿಳಿಸಿ ತಮ್ಮ ಮೇಲೆ ಜಾಳುಜಾಳದ ಹಾಗೂ ಅಸ್ಪಷ್ಟ ಆರೋಪಗಳನ್ನು ಹೊರಿಸಿ ಇಲಾಖಾ ವಿಚಾರಣೆಗಳನ್ನು ಮಾಡಲಾಗಿರುವುದರಿಂದ ದಾಖಲೆಗಳನ್ನು ಸರಿಯಾಗಿ ಪರಿಶೀಲಿಸದೆ ವಿಚಾರಣೆ ನಡೆಸಿ ವಿಚಾರಣೆ ವರದಿ ಸಲ್ಲಿಸಿದ್ದನ್ನು ಒಪ್ಪಿಕೊಳ್ಳದೇ ತಮ್ಮನ್ನು ಆರೋಪ ಮುಕ್ತರನ್ನಾಗಿಸುವಂತೆ ಕೋರಿದ್ದಾರೆ.

ಆರೋಪಿ ನಿವೃತ್ತ ಅಧಿಕಾರಿಯ ಉತ್ತರವನ್ನು ದಾಖಲೆಗಳೊಡನೆ ಪರಿಶೀಲಿಸಲಾಗಿ ಮೂಲ ದಾಖಲೆಗಳನ್ನು ಆಧರಿಸಿಯೇ ವಿಚಾರಣಾಧಿಕಾರಿಗಳು ವಿಚಾರಣೆ ನಡೆಸಿದ್ದು ಯಾವುದೇ ಆರೋಪದಲ್ಲಿಯೂ ಅಸ್ಪಷ್ಟತೆ ಇಲ್ಲ. ಇನಾಂ ರದ್ದತಿ ಕಾಯ್ದೆ ಅನ್ವಯ ಇನಾಂ ಜಮೀನು ಸರ್ಕಾರಕ್ಕೆ ವಿಹಿತಗೊಂಡ ನಂತರವೇ ತಸ್ದೀಕ್ ಮೊತ್ತವನ್ನು ನಿಗದಿಪಡಿಸಬೇಕು. ಆದರೆ ಅಧಿಕಾರಿಯು 1.7.1970 ರಂದು ಸದರಿ ಜಮೀನುಗಳು ವಿಹಿತಗೊಂಡಿದ್ದನ್ನು ಖಚಿತ ಪಡಿಸಿಕೊಳ್ಳದೇ ತಸ್ದೀಕ್ ಮೊತ್ತವನ್ನು ನಿಗದಿಪಡಿಸಲು ತನ್ನ ಅಧೀನ ನೌಕರರ ಟಿಪ್ಪಣಿಗೆ ವ್ಯತಿರಿಕ್ತವಾಗಿ ಶಿಫಾರಸ್ಸು ಮಾಡಿರುವುದು ವಿಚಾರಣಾ ವರದಿಯಲ್ಲಿಯೇ ಮೂಡಿ ಬಂದಿದೆ. ಇನಾಂ ಜಮೀನಿನ ವಾಸ್ತವಿಕ ವಿಸ್ತೀರ್ಣ ಪತ್ತೆ ಹಚ್ಚದೇ ದೇವಸ್ಥಾನಕ್ಕೆ ಸಂಬಂಧಿಸಿದವರಿಗೆ ಅನುಕೂಲ ಮಾಡಿರುವ ದುರುದ್ದೇಶದಿಂದ ಹೆಚ್ಚಿಗೆ ಅಂತಿಮ ತಸ್ದೀಕ್ ಹಣ ನಿಗದಿಪಡಿಸಲು ಅವಕಾಶ ಮಾಡಿಕೊಟ್ಟು ಸರ್ಕಾರಕ್ಕೆ ಭಾರಿ ನಷ್ಟವನ್ನು ಉಂಟು ಮಾಡಲಾಗಿರುತ್ತದೆ. ಆದ್ದರಿಂದ ಶ್ರೀ ಬಿ. ನಿಂಗೇಗೌಡ, ನಿವೃತ್ತ ಕೆಎಎಸ್ ಅಧಿಕಾರಿ ಅವರ ಆಕ್ಷೇಪಣೆಗಳಲ್ಲಿ ಯಾವುದೇ ತಿರುಳಿಲ್ಲ ಹಾಗೂ ವಿಚಾರಣೆ ವರದಿಯನ್ನು ಕೇವಲ ಔಪಚಾರಿಕವಾಗಿ ವಿರೋಧಿಸುತ್ತಿದ್ದಾರೆಂದು ಪರಿಗಣಿಸಿ ಅವರ ಉತ್ತರವನ್ನು ಒಪ್ಪದೇ ಆರೋಪಗಳು ಸಾಬೀತಾಗಿವೆ ಎಂಬ ವಿಚಾರಣಾಧಿಕಾರಿಗಳ ವರದಿಯನ್ನು ಒಪ್ಪಿಕೊಂಡು ಕರ್ನಾಟಕ ಲೋಕ ಸೇವಾ ಆಯೋಗದ ಸಹಮತಿಯೊಡನೆ ದಂಡನೆ ವಿಧಿಸಲು ಸರ್ಕಾರವು ತೀರ್ಮಾನಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಆದೇಶ ಕ್ರಮಾಂಕ ಸಿಆಸುಇ 141 ಎಸ್‌ಇಎನ್ 91, ಬೆಂಗಳೂರು, ದಿನಾಂಕ: 3ನೇ ನವೆಂಬರ್ 2003**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ 214ನೇ ನಿಯಮದಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಬಿ. ನಿಂಗೇಗೌಡ, ನಿವೃತ್ತ ಕೆಎಎಸ್ ಅಧಿಕಾರಿ ಅವರ ನಿವೃತ್ತಿ ಸೌಲಭ್ಯಗಳಿಂದ ರೂ. 2,31,420-00 ಗಳನ್ನು ವಸೂಲಿ ಮಾಡಬೇಕೆಂದು ಹಾಗೂ ಅವರ ಮಾಸಿಕ ವಿಶ್ರಾಂತಿ ವೇತನದಿಂದ ಮಾಹೆಯಾನ 500-00 ರೂ.ಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ನಿರಂತರವಾಗಿ ಕಡಿತಗೊಳಿಸಬೇಕೆಂದು ಈ ಮೂಲಕ ಆದೇಶಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1413

**ಕೆ. ರಘುರಾಮ್ ಭಂಡಾರಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ, (ಸೇವೆಗಳು-3).

**ವಿಷಯ :** ಶ್ರೀ ಎನ್. ಮಹದೇವ ಅಧೀನ ಕಾರ್ಯದರ್ಶಿ, ಆರ್ಥಿಕ ಇಲಾಖೆ (ಆರ್ಥಿಕ ಆಯೋಗ ಕೋಶ) ಇವರ ಗುತ್ತಿಗೆ ಆಧಾರದ ನೇಮಕಾತಿಯ ಷರತ್ತು ಹಾಗೂ ನಿಬಂಧನೆಗಳು.

**ಓದಲಾಗಿದೆ :** 1) ಅಧಿಸೂಚನೆ ಸಂಖ್ಯೆ: ಸಿಆಸುಇ 336 ಸಆಸೇ 2002 ದಿನಾಂಕ: 28.10.2003.

ಪ್ರಸ್ತಾವನೆ:

ಮೇಲೆ ಓದಲಾಗಿರುವ ಅಧಿಸೂಚನೆಯಲ್ಲಿ ಶ್ರೀ ಎನ್. ಮಹದೇವ, ನಿವೃತ್ತ ಅಧೀನ ಕಾರ್ಯದರ್ಶಿ, ಕರ್ನಾಟಕ ಸರ್ಕಾರ ಸಚಿವಾಲಯ ಇವರನ್ನು ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಾವಳಿಗಳು 1977 ನಿಯಮ 15 (1) (ಎ)ರ ಅನ್ವಯ ಸಚಿವಾಲಯದ ಆರ್ಥಿಕ ಇಲಾಖೆಯ ಆರ್ಥಿಕ ಆಯೋಗ ಕೋಶದ ಅಧೀನ ಕಾರ್ಯದರ್ಶಿ ಹುದ್ದೆಯಲ್ಲಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಒಂದು ವರ್ಷದ ಅವಧಿಗೆ ಗುತ್ತಿಗೆ ಆಧಾರದ ಮೇಲೆ ನೇಮಿಸಲಾಗಿದೆ.

ಸದರಿ ಗುತ್ತಿಗೆ ಆಧಾರದ ನೇಮಕಾತಿಯ ಷರತ್ತು ಹಾಗೂ ನಿಬಂಧನೆಗಳನ್ನು ನಿಗದಿಪಡಿಸುವ ಅಗತ್ಯತೆಯನ್ನು ಮನಗಂಡು ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ; ಸಿಆಸುಇ 336 ಸಅಸೇ 2002, ಬೆಂಗಳೂರು, ದಿನಾಂಕ: 4ನೇ ನವೆಂಬರ್ 2003**

1. ಶ್ರೀ ಎನ್. ಮಹದೇವರವರ ಗುತ್ತಿಗೆ ನೇಮಕಾತಿ ಅವಧಿಯು ಆದೇಶ ಹೊರಡಿಸಿದ ದಿನಾಂಕದಿಂದ ಒಂದು ವರ್ಷದವರೆಗೆ ಅಥವಾ ಮುಂದಿನ ಆದೇಶ ಹೊರಡಿಸುವವರೆಗೆ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮಾತ್ರ ಇದ್ದು, ಇದೊಂದು ತಾತ್ಕಾಲಿಕ ನೇಮಕಾತಿ ಆಗಿರುತ್ತದೆ.
2. ಶ್ರೀ ಎನ್. ಮಹದೇವ ಇವರು ಪಡೆಯುತ್ತಿರುವ ನಿವೃತ್ತಿ ವೇತನದೊಂದಿಗೆ ಕೆ.ಸಿ.ಎಸ್.ಆರ್ಸ್ ನಿಯಮ 313 (ಬಿ) ಪ್ರಕಾರ ಮರು ನೇಮಕಾತಿ ವೇತನವನ್ನು ಪಡೆಯಲು ಅರ್ಹರಾಗಿರುತ್ತಾರೆ. ಹಾಗೂ ಆರ್ಥಿಕ ಆಯೋಗದ ಕೆಲಸಗಳಿಗಾಗಿ ಆಯೋಗದ ಅಧಿಕಾರಿ ಮತ್ತು ಸಿಬ್ಬಂದಿಗೆ ನೀಡಲಾಗುವ ವಿಶೇಷ ವೇತನವನ್ನು ಇವರಿಗೆ ಅಧೀನ ಕಾರ್ಯದರ್ಶಿಯ ದರ್ಜೆಯ ಅಧಿಕಾರಿಯ ವೇತನ ಶ್ರೇಣಿಗೆ ಲಭ್ಯವಾಗುವಂತೆ ವಿಶೇಷ ವೇತನ ಪಡೆಯುವರು. ಈ ವೇತನದ ಜೊತೆಗೆ ಅವರು ನಿವೃತ್ತಿ ಹೊಂದುವಾಗ ಪಡೆಯುತ್ತಿದ್ದ ಮೂಲ ವೇತನದ ಮೇಲೆ ಕಾಲಕಾಲಕ್ಕೆ ಲಭ್ಯವಾಗುವ ತುಟ್ಟಿಭತ್ಯೆ, ಮನೆ ಬಾಡಿಗೆ ಭತ್ಯೆ, ನಗರ ಪರಿಹಾರ ಭತ್ಯೆಯನ್ನು ಪಡೆಯಲು ಅರ್ಹರಾಗಿರುತ್ತಾರೆ. ಆದರೆ ಅವರು ಪಡೆಯುತ್ತಿರುವ ನಿವೃತ್ತಿ ವೇತನದ ಮೇಲೆ ತುಟ್ಟಿಭತ್ಯೆ ಸೇರಿದಂತೆ ಯಾವುದೇ ಇತರ ಭತ್ಯೆಗಳು ಲಭ್ಯವಿರುವುದಿಲ್ಲ.
3. ಸದರಿ ಗುತ್ತಿಗೆ ನೌಕರರು ಸಾರ್ವಜನಿಕ ಹಿತದೃಷ್ಟಿಯಿಂದ ಪ್ರಯಾಣ ಮಾಡಲೇ ಬೇಕಾದಲ್ಲಿ ಮಾತ್ರ ಅವರು ಗುತ್ತಿಗೆ ನೇಮಕಾತಿ ಹೊಂದಿರುವ ಹುದ್ದೆಯ ಕಾಲಿಕ ವೇತನ ಶ್ರೇಣಿಯ ಕನಿಷ್ಟ ವೇತನದ ಮೇಲೆ ನಿಯಮಾನುಸಾರ ಲಭ್ಯವಿರುವ ಪ್ರಯಾಣ ಭತ್ಯೆ ಮತ್ತು ದಿನ ಭತ್ಯೆಯನ್ನು ಪಡೆಯಲು ಅರ್ಹರಿರುತ್ತಾರೆ.
4. ಸದರಿ ಗುತ್ತಿಗೆ ನೌಕರರು ವಾರ್ಷಿಕ 15 ದಿನಗಳ ಸಾಂದರ್ಭಿಕ ರಜೆ ಮತ್ತು ಕೆ.ಸಿ.ಎಸ್.ಆರ್ಸ್. ನಿಯಮ 150ರ ಪ್ರಕಾರ ಗಳಿಕೆ ರಜೆ ಪಡೆಯಲು ಅರ್ಹರಿರುತ್ತಾರೆ.
5. ಒಪ್ಪಂದದ ಷರತ್ತು ಮತ್ತು ನಿಬಂಧನೆಗಳಲ್ಲಿ ನೀಡಿರುವ ಸೌಲಭ್ಯಗಳ ಹೊರತಾಗಿ ಬೇರಾವುದೇ ಸೌಲಭ್ಯಕ್ಕೆ ಅಂದರೆ ವೇತನ ಬಡ್ತಿ ಪದೋನ್ನತಿ, ಪಿಂಚಣಿ ಇತ್ಯಾದಿ ಸೌಲಭ್ಯಗಳಿಗೆ ಸದರಿ ಗುತ್ತಿಗೆ ನೌಕರರು ಅರ್ಹರಾಗಿರುವುದಿಲ್ಲ.
6. ಸದರಿ ನೌಕರರ ದುರ್ವರ್ತನೆ ನಿರ್ಲಕ್ಷತೆಯ ನಿಮಿತ್ತ ಸರ್ಕಾರಕ್ಕೆ ಸಂಬಂಧಿಸಬಹುದಾದ ಎಲ್ಲಾ ನಷ್ಟಗಳನ್ನು ಸರ್ಕಾರಕ್ಕೆ ಸದರಿ ನೌಕರರು ಭರಿಸಿಕೊಡಲು ಬದ್ಧರಾಗಿರತಕ್ಕದ್ದು.
7. ಸದರಿ ಮರು ನೇಮಕಾತಿ ಅವಧಿಯ ಸೇವೆಯನ್ನು ನಿವೃತ್ತಿ ವೇತನ ಹಾಗೂ ಇತ್ಯಾದಿ ಸೌಲಭ್ಯಗಳಿಗೆ ಅರ್ಹತಾದಾಯಕ ಸೇವೆಯೆಂದು ಪರಿಗಣಿಸುವುದಿಲ್ಲ.
8. ಅವರ ಕರ್ತವ್ಯ ಕಾರ್ಯ ಮತ್ತು ಪ್ರಕಾರ್ಯಗಳನ್ನು ಶ್ರದ್ಧೆ, ಭಕ್ತಿ ಮತ್ತು ಆಸಕ್ತಿಯಿಂದ ಅವರು ನೆರವೇರಿಸುವುದು.
9. ಅವರು ಕರ್ತವ್ಯವನ್ನು ಪಾಲಿಸುತ್ತಿರುವಾಗ ಅಥವಾ ನೆರವೇರಿಸುತ್ತಿರುವಾಗ ಅವರಿಗೆ ಲಭ್ಯವಾಗಬಹುದಾದ ಅಥವಾ ದೊರಕಬಹುದಾದ ಅಧಿಕೃತ ಮಾಹಿತಿಯನ್ನು ಗೌಪ್ಯವಾಗಿಟ್ಟು ಕಟ್ಟುನಿಟ್ಟಾಗಿ ಪಾಲಿಸಬೇಕು.
10. 1966ರ ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಾವಳಿ ಮತ್ತು 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗೆ ಅವರು ಬದ್ಧರಾಗಿರುತ್ತಾರೆ.
11. ಈ ಒಪ್ಪಂದದ ಷರತ್ತುಗಳನ್ನು ಉಲ್ಲಂಘಿಸಿದಲ್ಲಿ ಗುತ್ತಿಗೆ ನೇಮಕಾತಿಯು ತಾನಾಗಿಯೇ ಮುಕ್ತಾಯವಾಗುತ್ತದೆ.
12. ಅವರ ದುರ್ನಡತೆಯಿಂದಾಗಲೀ ಅಥವಾ ನಿರ್ಲಕ್ಷತೆ, ಉದಾಸೀನತೆಯಿಂದಾಗಲೀ ಮತ್ತು ಸರ್ಕಾರಕ್ಕೆ ಸಂಬಂಧಿಸಿದಂತೆ ಆರ್ಥಿಕ ನಷ್ಟವನ್ನು ಅವರು ಸರ್ಕಾರಕ್ಕೆ ತುಂಬಿಕೊಡಲು ಹೊಣೆಯಾಗಿರುತ್ತಾರೆ
13. ನಿವೃತ್ತ ನೌಕರರ ಗುತ್ತಿಗೆ ಆಧಾರದ ಮರು ನೇಮಕಾತಿಗೆ ಸಂಬಂಧಿಸಿದಂತೆ, ಸಾಮಾನ್ಯವಾಗಿ ವಿಧಿಸಲಾಗುವ ಇತರ ಷರತ್ತುಗಳೇನಾದರು ಇದ್ದಲ್ಲಿ ಅವು ಅನ್ವಯಿಸುತ್ತದೆ.
14. ಈ ಆದೇಶವನ್ನು ಸ್ವೀಕರಿಸಿದ ದಿನಾಂಕದಿಂದ ಏಳು ದಿನಗಳ ಒಳಗಾಗಿ ಐವತ್ತು (ರೂ.50.00) ರೂಪಾಯಿಗಳ ಮೌಲ್ಯದ ಛಾಪಾ ಕಾಗದದಲ್ಲಿ ಸದರಿ ನೇಮಕಾತಿಯ ಷರತ್ತು ಮತ್ತು ನಿಬಂಧನೆಗಳನ್ನು ಒಳಗೊಂಡಿರುವ ಕರಾರು ಪತ್ರವನ್ನು ಕ್ರಮಬದ್ಧ ರೀತಿಯಲ್ಲಿ ನೀಡತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1414

**ಯು. ಪಿ. ಪ್ರಭು**

ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸು ಇಲಾಖೆ, (ಸೇವೆಗಳು-2).

## ಕಂದಾಯ ಸಚಿವಾಲಯ

**ವಿಷಯ :** ಕೊಟ್ಟೂರು ಹರಿಹರ ನಡುವೆ ಹೊಸ ರೈಲ್ವೆ ಬ್ರಾಡ್‌ಗೇಜ್ ನಿರ್ಮಾಣಕ್ಕೆ ಸಂಬಂಧಿಸಿದಂತೆ ತಾತ್ಕಾಲಿಕ ಸಿಬ್ಬಂದಿ ವರ್ಗದವರನ್ನು ಮುಂದುವರೆಸುವ ಬಗ್ಗೆ.

**ಉಲ್ಲೇಖ :** 1) ಆದೇಶ ಸಂ. ಕಂಇ 9 ಭೂಸ್ವಾಧಿ 2000, ದಿನಾಂಕ: 25.9.2002.

2) ಜಿಲ್ಲಾಧಿಕಾರಿಗಳು, ದಾವಣಗೆರೆ ಜಿಲ್ಲೆ, ದಾವಣಗೆರೆ ರವರ ಪತ್ರ ಸಂ. ಇಎಸ್‌ಟಿ: ಸಿಆರ್: 167: 2002-03, ದಿನಾಂಕ: 6.9.2003.

**ಪ್ರಸ್ತಾವನೆ:**

ಮೇಲೆ ಕ್ರಮ ಸಂ. (1)ರಲ್ಲಿ ಓದಲಾದ ದಿನಾಂಕ: 25.9.2002ರ ಆದೇಶದಲ್ಲಿ ಕೊಟ್ಟೂರು-ಹರಿಹರ ಬ್ರಾಡ್‌ಗೇಜ್ ರೈಲ್ವೆ ಲೈನ್ ನಿರ್ಮಾಣ ಮಾಡಲು ಭೂಸ್ವಾಧೀನ ಕೆಲಸಗಳನ್ನು ನಿರ್ವಹಿಸಲು 17 ಹುದ್ದೆಗಳನ್ನು ಸೃಜಿಸಿ ಆದೇಶ ಹೊರಡಿಸಲಾಗಿತ್ತು.

ಮೇಲೆ ಕ್ರಮ ಸಂ. (2)ರಲ್ಲಿ ಜಿಲ್ಲಾಧಿಕಾರಿಗಳು, ದಾವಣಗೆರೆ ಇವರು ಸದರಿ ಯೋಜನೆಯಲ್ಲಿ ಭೂಸ್ವಾಧೀನ ಕಾರ್ಯ ಪ್ರಗತಿಯಲ್ಲಿರುವುದರಿಂದ ಈ ತಾತ್ಕಾಲಿಕ ಹುದ್ದೆಗಳನ್ನು ದಿನಾಂಕ: 25.9.2003 ರಿಂದ 26.9.2004ರವರೆಗೆ ಮುಂದುವರೆಸಿ ಆದೇಶ ನೀಡುವಂತೆ ಕೋರಿರುತ್ತಾರೆ.

**ಸರ್ಕಾರದ ಆದೇಶ ಸಂ. ಕಂಇ 34 ಭೂಸ್ವಾಧಿ 2003, ಬೆಂಗಳೂರು, ದಿನಾಂಕ: 3ನೇ ನವೆಂಬರ್ 2003**

ವಿಷಯವನ್ನು ಕೂಲಂಕುಷವಾಗಿ ಪರಿಶೀಲಿಸಿ ಕೊಟ್ಟೂರು-ಹರಿಹರ ನಡುವೆ ಹೊಸ ರೈಲ್ವೆ ಬ್ರಾಡ್‌ಗೇಜ್ ನಿರ್ಮಾಣದ ಯೋಜನೆಯಲ್ಲಿ ಭೂಸ್ವಾಧೀನ ಕಾರ್ಯಗಳು ಇನ್ನೂ ಪ್ರಗತಿಯಲ್ಲಿರುವುದನ್ನು ಮನಗಂಡು ದಿನಾಂಕ: 25.9.2002ರಲ್ಲಿ ಸೃಜಿಸಲಾಗಿದ್ದ ಒಟ್ಟು 17 ತಾತ್ಕಾಲಿಕ ಹುದ್ದೆಗಳನ್ನು ದಿನಾಂಕ: 25.9.2003 ರಿಂದ 26.9.2004ರವರೆಗೆ ಒಂದು ವರ್ಷ ಕಾಲ ಮುಂದುವರಿಸಲು ಸರ್ಕಾರವು ಅನುಮತಿ ನೀಡಿದೆ.

ಸದರಿ ಆದೇಶವನ್ನು ಸರ್ಕಾರದ ಪ್ರಧಾನ ಕಾರ್ಯದರ್ಶಿಗಳಿಗೆ ಪ್ರದತ್ತವಾಗಿರುವ ವಿಶೇಷ ಆರ್ಥಿಕ ಅಧಿಕಾರಗಳನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1415 **ಎಂ. ಎ. ರಾಜಶೇಖರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ, (ಭೂಸ್ವಾ-1.3).

## DEPARTMENT OF PERSONNEL AND ADMINISTRATIVE REFORMS SECRETARIAT

**Sub :** Revocation of suspension of Sri. S. M. Raju, IAS (Bihar-1991).

**Read :** G. O. No. DPAR 236 SAS 2003, dated: 29.7.2003.

**Order No. DPAR 236 SAS 2003, Bangalore, Dated: 30th October 2003**

Whereas an order placing Sri. S. M. Raju, IAS (Bihar-1991), the then Director of Employment & Training, Bangalore, under suspension was made by the Government of Karnataka on 29.7.2003 vide Government Order read above.

Whereas, on the recommendations of the Review Committee constituted under rule 3(8) (c) of AIS (D&A) Rules, the Government of Karnataka has decided to revoke the order of suspension and to repatriate him to his parent cadre i.e., Bihar Cadre.

Now, therefore, the Government of Karnataka in exercise of the powers conferred by rule 3(7)(c) of AIS (D&A) Rules, 1969, hereby revoke the said order of suspension and reinstate Sri. S. M. Raju, IAS, in service with immediate effect, Pending proceedings under the AIS (D&A) Rules 1969.

Sri. S. M. Raju, IAS, is repatriated to his parent cadre (Bihar) with immediate effect.

Sri S. M. Raju, IAS, is inetructed to report in DPAR on 31.10.2003 (FN). He shall stand relieved from the Government of Karnataka on 31.10.2003 afternoon

By Order and in the Name of the Governor of Karnataka,

PR-1416 **S. SELVAKUMAR**

Deputy Secretary to Government, DPAR (Services).

## ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವಾಲಯ

### ತಿದ್ದುಪಡಿ ಆದೇಶ

**ಸಂಖ್ಯೆ: ಪಸಂಮೀ 267 ಪಆಸೇ 2003 ಬೆಂಗಳೂರು, ದಿನಾಂಕ: 27ನೇ ಅಕ್ಟೋಬರ್ 2003**

ಸರ್ಕಾರಿ ಅಧಿಸೂಚನೆ ಸಂಖ್ಯೆ ಪಸಂಮೀ 170 ಪಆಸೇ 2002 ದಿನಾಂಕ: 1.1.2003ರ 6ನೇ ಸಾಲಿನಲ್ಲಿರುವ "ಕಾರ್ಯದರ್ಶಿ, ಕರ್ನಾಟಕ ಕುರಿ ಮತ್ತು ಕುರಿ ಉತ್ಪನ್ನಗಳ ಅಭಿವೃದ್ಧಿ ಮಂಡಳಿ" ಬದಲಾಗಿ "ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಕುರಿ ಮತ್ತು ಉಣ್ಣೆ ಅಭಿವೃದ್ಧಿ ನಿಗಮ" ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1417 **ಪಿ. ಸಂಪತ್‌ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ.